ಶ್ರೀರಸ್ತು.

ಂದಚಂದ್ರಿಕಾ ಗ್ರಂಥಮಾಲಾ! ದ್ವಿತೀಯಕುಸುಮ

ೀಮದನಂತ ನಿಗಮಾಂತ ಪರಮ ತತ್ವಾರ್ಥ ಪ್ರಕಾಶಕವೂ, ಪರಮಾತ್ಮನ
ಚಿತ್ರಚರಿತ್ರ ಸೂಚಕವೂ, ಪರಮಾದ್ಭುತ ಕಾರ್ಯಕ್ರಮ ಬೋಧಕವೂ,
ನವರಸಾಲಂಕಾರ ಭರಿತವೂ, ಭಕ್ತಿರಸ ಪ್ರಧಾನವೂ, ತತ್ವಾರ್ಥ
ಗರ್ಭಿತವೂ, ಪುರಾಣಪುರುಷನ ಪರಿಪೂರ್ಣತಮಾ
ವತಾರ ಲೀಲಾವಿಲಾಸವೂ

ಅಥ,

# ಶ್ರೀಕೃಷ್ಣಲೀಲೆ.

ಎಂಬೀ ಗ್ರಂಥವು.

ಕಾ. ಶಿವರಾಮದಾಸ ವಿರಚಿತವು.



ಪ್ರಥಮ ಮುದ್ರಣ.

ವಿಳಾಸ:— ಕಾ. ಶಿವರಾಮ ದಾಸ್, ಸಂಪಾದಕ
ಆನಂದಚಂದ್ರಿಕಾ ಆಫೀಸ್,




[illegible] ರೂ. 1-4-0

ಶ್ರೀ ರಸ್ತು.

# ಶ್ರೀ ಕೃಷ್ಣಲೀಲೆ

## ಅವತಾರಿಕೆ.

"ಆರಬ್ಧಂ ನೈಮಿಶಾರಣ್ಯೇ । ಸತ್ರಂ ದ್ವಾದಶವಾರ್ಷಿಕಂ ।
ಆಜಗ್ಮುರಖಿಲಾಸ್ತತ್ರ । ಮುನಯೋಬ್ರಹ್ಮವಾದಿನಃ" ॥

ಪುಣ್ಯಭೂಮಿಯಾದ ನೈಮಿಶಾರಣ್ಯದಲ್ಲಿ, ಶೌನಕ ಮಹರ್ಷಿಯ ಅಧ್ಯಕ್ಷತೆಯಲ್ಲಿ ನಡೆಯುತ್ತಿದ್ದ ವಿಷ್ಣುಪೂಜಾರೂಪವಾದ ಸತ್ರಯಾಗಕ್ಕೆ ಬ್ರಹ್ಮವೇತ್ತರಾದ ಋಷಿಮುನಿಗಳು ಅನೇಕಾನೇಕವಾಗಿ ಬಂದು ಸೇರಿದರು. ಹನ್ನೆರಡು ವರ್ಷಗಳ ಪರ್ಯಂತ ನಡೆಯಬೇಕಾದ ಆ ಮಹತ್ಕಾರ್ಯಕ್ಕೆ ಭಗವತ್ಕಥಾಪ್ರಸಂಗಮಾಡುವುದರಲ್ಲಿ ಅದ್ವಿತೀಯನೆನಿಸಿದ ಸೂತಪೌರಾಣಿಕನು ಬಿಜಯ ಮಾಡಿದನು. ಮಹಾತ್ಮನಾದ ಸೂತಪೌರಾಣಿಕನನ್ನು ನೋಡುತ್ತಲೇ ಋಷಿಮುನಿಗಳೆಲ್ಲರೂ ಭಕ್ತಿಪೂರ್ವಕವಾಗಿ ನಮಸ್ಕಾರಗಳನ್ನಾಚರಿಸಿದರು. ಶೌನಕ ಮಹರ್ಷಿಯು ಸೂತನಿಗೆ ಸಾಷ್ಟಾಂಗ ದಂಡಪ್ರಣಾಮಗಳನ್ನಾಚರಿಸಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಉಚಿತಾಸನವನ್ನಿತ್ತನು. ಬ್ರಹ್ಮರ್ಷಿಗಳೆಲ್ಲರೂ ಒಂದೇ ಅಭಿಪ್ರಾಯದಿಂದ ಸೂತನಿಗೆ ಬ್ರಹ್ಮಾಸನವನ್ನಿತ್ತರು. ಸೂತನು ಋಷಿಮುನಿಗಳೆಲ್ಲರಿಗೂ ಪ್ರತಿವಂದನಗಳನ್ನಾಚರಿಸಿದನು. ಎಲ್ಲರೂ ಸುಖಾಸೀನರಾದ ನಂತರ ಶೌನಕನು ಸಭಾಸದರ ಅಪ್ಪಣೆಯನ್ನು ಪಡೆದು ಸೂತಪೌರಾಣಿಕನನ್ನು ಈ ರೀತಿಯಾಗಿ ಪ್ರಾರ್ಥಿಸಿದನು.

ಶ್ಲೋ॥ ಸೂತಸರ್ವಗುಣೋಪೇತ ಸರ್ವಶಾಸ್ತ್ರ ವಿಶಾರದ । ತವದ
ರ್ಶನಮಾತ್ರೇಣ ಸರ್ವಪಾಪಂ ವಿನಾಶಿತಂ । ಚರಿತಂ ಶ್ರೋತು
ಮಿಚ್ಛಾಮಃ ವಿಷ್ಣೋರದ್ಭುತ ಕರ್ಮಣಃ । ಪರಿಬ್ರೂಹಿ ದಯಾ
ಸಾಂದ್ರ ಸರ್ವಶಾಸ್ತ್ರಾರ್ಥಪಾರಗ ॥

ಸರ್ವಶಾಸ್ತ್ರವಿಶಾರದನಾದ ಸೂತನೆ ! ನಿನ್ನ ದರ್ಶನದಿಂದ ನಾವು ಪುನೀತರಾದೆವು. ಕಲ್ಯಾಣಗುಣಾಭಿರಾಮನಾದ ಶ್ರೀಮನ್ನಾರಾಯಣನ ದಿವ್ಯಚರಿತ್ರವನ್ನು ನಿನ್ನಿಂದಕೇಳಲಿಚ್ಛಿಸುವೆವು. ಆದುದರಿಂದ ಭಗವಂತನ ಲೀಲಾವಿಶೇಷಗಳನ್ನು ತಿಳಿಸತಕ್ಕ ಯಾವುದಾದರೊಂದು ಪುಣ್ಯಚರಿತ್ರವನ್ನು ಅಭಿವರ್ಣಿಸಿ ಸಭಾಸದರನ್ನು ಸಂತೋಷಗೊಳಿಸು ! ಎಂದು ಪ್ರಾರ್ಥಿಸಲಾಗಿ ಸೂತನಿಂತೆಂದನು.

ಶಾ॥ ಪ್ರಾಪ್ತಾನಂದರು ಬ್ರಹ್ಮಬೋಧನಕಳಾಪಾರೀಣರಾತ್ಮಪ್ರಭಾ ।
ಲುಪ್ತಾಜ್ಞಾನರಪಾರಸಾರಹೃದಯರ್ ಕಾರುಣ್ಯಶೀಲರ್ಮನೋ ।
ಗುಪ್ತಾನೇಕಸುಶಾಸ್ತ್ರರಚ್ಯುತಕಥಾಪೀಯೂಷಪಾನೋರುಸಂ।
ತೃಪ್ತರ್ ಮಾನ್ಯರುತಾವು ಬಲ್ಲಿರಖಿಲಂ ನಾಂ ವರ್ಣಿಸಲ್ ಶಕ್ತನೇ ॥

ಮಹಾತ್ಮರೇ ! ಸರ್ವಶಾಸ್ತ್ರಪಾರಂಗತರಾದ ತಮ್ಮ ಸನ್ನಿಧಿಯಲ್ಲಿ ಕಥಾಪ್ರಸಂಗ ಮಾಡುವಷ್ಟು ಕುಶಲತೆಯು ನನಗಿರುವುದೆ ! ತಾವರಿಯದ ನೂತನ ಚರಿತ್ರೆಗಳನ್ನು ನಾನೇನು ಬಲ್ಲೆನು ? ಆದಾಗ್ಯೂ ತಾವು ನಿಷ್ಕಳಂಕವಾದಭಗವದ್ಭಕ್ತಿಯುಳ್ಳವರಾದುದರಿಂದಲೂ, ಪರಮಾತ್ಮನ ಕಲ್ಯಾಣಗುಣಗಳನ್ನು ಎಷ್ಟುಸಾರಿ ಹೇಳಿದರೂ, ಎಷ್ಟುಸಾರಿ ಕೇಳಿದರೂ ಎಂದೆಂದಿಗೂ ನೂತನವಾಗಿಯೇ ಕಾಣುವುದರಿಂದಲೂ, ತಮ್ಮ ಸಮಾಗಮವು ನನಗೆ ಪರಮ ಸಂತೋಷಕರವಾದುದರಿಂದಲೂ ಶ್ರೀಮನ್ನಾರಾಯಣಮೂರ್ತಿಯು ಲೋಕರಕ್ಷಣಾರ್ಥವಾಗಿ ಶ್ರೀ ಕೃಷ್ಣಾವತಾರದಲ್ಲಿ ತೋರ್ಪಡಿಸಿದ ಅದ್ಭುತಲೀಲಾವಿಶೇಷಗಳಿಂದ ಶೋಭಿತವಾದ “ಶ್ರೀ ಕೃಷ್ಣಲೀಲೆ” ಎಂಬ ಪುಣ್ಯಚರಿತ್ರೆಯನ್ನು ಪ್ರಸಂಗ ಮಾಡುವೆನು. ಸಾವಧಾನ ಚಿತ್ತರಾಗಿ ಕೇಳಿರಿ. ಎಂಬದಾಗಿ ನಿಶ್ಚಯಿಸಿ, ಸೂತಪೌರಾಣಿಕನು ಶೌನಕಾದಿ ಮಹರ್ಷಿಗಳಿಗೆ ಶ್ರೀ ಕೃಷ್ಣ

ಚರಿತ್ರೆಯನ್ನು ಪ್ರಸಂಗಮಾಡಿದನು. ಆ ವಿವರವಿಲ್ಲಿ ಸೂಚಿಸಲ್ಪಡು ತ್ತದೆ. ಶ್ರಿಯಃಪತಿಯಾಗಿ, ಶ್ರೀ ವೈಕುಂಠನಿಕೇತನನಾಗಿ, ಶ್ರೀ ಭೂ ನೀಳಾಸಮೇತನಾಗಿ, ಶೇಷಪರ್ಯಂಕದಲ್ಲಿ ನಿತ್ಯಾನಂದಮಯನಾಗಿ ಪವಡಿ ಸಿದ್ದ ಭಗವಂತನ ಸನ್ನಿಧಿಗೆ,ಬ್ರಹ್ಮೇಂದ್ರಾದಿ ದೇವತೆಗಳೂ,ಋಷಿಮುನಿ ಗಳೂ ಬಂದು ಕಂಸಾದಿ ದುಷ್ಟರಾಕ್ಷಸರ ಹಾವಳಿಯನ್ನು ಬಿನ್ನವಿಸ ಲಾಗಿ ಭಗವಂತನು ಶ್ರೀ ಕೃಷ್ಣಾವತಾರವನ್ನು ಪರಿಗ್ರಹಿಸಿ ದುಷ್ಟರಾದ ರಕ್ಕಸರನ್ನು ಸಂಹರಿಸಿ ಲೋಕೋದ್ಧಾರಮಾಡುವುದಾಗಿ ಸೂಚಿಸಿ, ಅಭಯಹಸ್ತವನ್ನಿತ್ತು ಬ್ರಹ್ಮಾದಿಗಳನ್ನು ಕಳುಹಿಸಿಕೊಟ್ಟನು.

ಶ್ಲೋ॥ ತತೋಽಹಂಸಂಭವಿಷ್ಯಾಮಿ ದೇವಕೀಜಠರೇಶುಭೇ । ಗರ್ಭೇ ತ್ವಯಾಯಶೋದಾಯಾ । ಗಂತವ್ಯಮವಿಲಂಬಿತಂ ॥
ಪ್ರಾವೃಟ್ಕಾಲೇಚನಭಸಿ । ಕೃಷ್ಣಾಷ್ಟಮ್ಯಾಮಹಂನಿಶಿ । ಉತ್ಪ ತ್ಸ್ಯಾಮಿನವಮ್ಯಾಂಚ । ಪ್ರಸೂತಿಂತ್ವಮವಾಪ್ಸ್ಯಸಿ ॥ ದೇವಕೀ ಚಯಶೋದಾಚ । ಸುಷುವಾತೇಸಮಂತದಾ । ಯಾಮೇವರ ಜನೀಂಕೃಷ್ಣೋ । ಜಜ್ಞೇವೃಷ್ಣಿಕುಲೇಪ್ರಭುಃ ॥ ತಾಮೇವರ ಜನೀಂಕನ್ಯಾಂ । ಯಶೋದಾದೇವ್ಯಜಾಯತ । ಅಷ್ಟಮ್ಯಾಂ ಶ್ರಾವಣೇಮಾಸಿ । ಕೃಷ್ಣಪಕ್ಷೇಮಹಾತಿಥೌ ॥ ರೋಹಿಣ್ಯಾ ಮರ್ಧರಾತ್ರೇಚ । ಸುಧಾಂಶಾವುದಯೇನ್ಮುಖೇ । ದೇವಕ್ಯಜನ ಯದ್ವಿಷ್ಣುಂ । ಯಶೋದಾತಾಂತುಕನ್ಯಕಾಂ । ಮುಹೂ ರ್ತೇಽಭಿಜಿತಿಪ್ರಾಪ್ತೇಹ್ಯರ್ಧರಾತ್ರೇಸುಖಾವಹೇ ॥ ವಸುದೇವ ಸ್ತತೋಗತ್ವಾ । ದೇವಕೀಗರ್ಭವೇಶ್ಮತತ್ । ದದರ್ಶದೇವ ದೇವೇಶಂ । ರಾತ್ರೌಜಾತಮಧೋಕ್ಷಜಂ ॥ ಶಯಾನಮಾಂಬು ಜೇಪತ್ರೇ । ವಟಪತ್ರೇಯಥಾಪುರಾ । ಪ್ರಾಚೀನಶಿರಸಂದೇವಂ ಪಶ್ಚಿಮನ್ಯಸ್ತಪಾದಕಂ ॥ (ಹರಿವಂಶ-ಅಧ್ಯಾಯ 52-53)

ಸತ್ಯವ್ರತನಾದ ಭಗವಂತನು, ತನ್ನ ವಾಕ್ಯಪರಿಪಾಲನಾರ್ಥವಾಗಿ ಬ್ರಹ್ಮಪ್ರಳಯಾನಂತರವಾದ ಇಪ್ಪತ್ತೆಂಟನೇ ಮಹಾಯುಗಕ್ಕೆ ಸೇರಿದ ಈ ಕಲಿಯುಗಕ್ಕೆ ಪೂರ್ವದ ದ್ವಾಪರಯುಗದಲ್ಲಿ 8,63,874 ವರ್ಷ ಗಳು, 4 ತಿಂಗಳು, 21 ದಿನಗಳು ಕಳೆದನಂತರ ಸಂಭವಿಸಿದ ಶ್ರೀ ಮುಖ

ಸಂವತ್ಸರ ಶ್ರಾವಣ ಬಹುಳ ನವಮೀವಿದ್ಧಾಷ್ಟಮೀ. ಮಂಗಳವಾರ ಮಧ್ಯರಾತ್ರಿ ರೋಹಿಣೀನಕ್ಷತ್ರದ ವೃಷಭಲಗ್ನದಲ್ಲಿಸಂಭವಿಸಿದ ಸರ್ವೋತ್ತಮವಾದ ಅಭಿಜಿನ್ಮುಹೂರ್ತದಲ್ಲಿ ಪರಬ್ರಹ್ಮನಾದ ಶ್ರೀಮನ್ನಾರಾಯಣನು ಇಚ್ಛಾಮಾತ್ರವಾದ ಲೀಲಾಮಾನುಷಶರೀರವನ್ನು ಪರಿಗ್ರಹಿಸಿ, ಪರಮ ಪುಣ್ಯಾತ್ಮರಾದ ದೇವಕೀ ವಸುದೇವರಿಗೆ ಪುತ್ರನಾಗಿ ಮಧುರಾನಗರದ ಸೆರೆಮನೆಯಲ್ಲಿ ಶ್ರೀ ಕೃಷ್ಣಪರಮಾತ್ಮನವತರಿಸಿದನು.

* ತತ್ಕಾಲಗ್ರಹ ಸಂಪತ್ತಿ. *

| | | | |
|---|---|---|---|
| | ಗುರು | ಲಗ್ನ ಚಂದ್ರ | ರಾಹು |
| | ರಾಶಿ ಚಕ್ರ | | ಕುಜ ಬುಧ |
| | | | ರವಿ ಶನಿ |
| ಕೇತು | | | ಶುಕ್ರ |

ಶ್ರೀಕೃಷ್ಣಪರಮಾತ್ಮನು ಅವತರಿಸಿದ ಕಾಲದಲ್ಲಿ ದಿಕ್ಕುಗಳು ನಿರ್ಮಲಗಳಾದುವು. ಸೂರ್ಯಚಂದ್ರಾದಿ ಗ್ರಹತಾರೆಗಳು ಶಾಂತವಾಗಿ ಪ್ರಕಾಶಿಸಿದುವು. ಗಗನಮಂಡಲವು ನಿಷ್ಕಳಂಕವಾಗಿ ಶೋಭಿಸಿತು. ಸಮುದ್ರಗಳು ಉತ್ತುಂಗತರಂಗರಂಜಿತವಾಗಿ ಮೆರೆದುವು. ನದೀನದಗಳು ನಿರ್ಮಲಜಲವಾಹಿನಿಗಳಾಗಿ ಕಂಗೊಳಿಸಿದುವು. ಸರೋವರಗಳಲ್ಲಿ ಕಮಲಪುಷ್ಪಗಳು ಅರುಣಕಾಂತಿಯಿಂದ ರಾಜಿಸಿದುವು. ಮಲಯಮಾರುತವು ಬೀಸಲಾರಂಭಿಸಿತು. ಫಲ—ಪುಷ್ಪಶೋಭಿತವಾದ ತರುಲತಾದಿಗಳು ಸುಗಂಧಬಂಧುರವಾಗಿ ವಿರಾಜಿಸಿದುವು. ದೇವತೆಗಳಾದಿಯಾಗಿ ಸಾಧುಸಜ್ಜನರಿಗೆ ಆನಂದವುಕ್ಕಳಿಸಿತು. ಇಂತಹ ಪರಮಮಂಗಳಕರವಾದ ಸುಸಮಯದಲ್ಲಿ ಶ್ರೀಕೃಷ್ಣಪರಮಾತ್ಮನು ಪದ್ಮಪತ್ರಗಳಮೇಲೆ ಪೂರ್ವಶಿರಸ್ಕನಾಗಿಯೂ, ಶಂಖಚಕ್ರಗದಾಪದ್ಮಗಳನ್ನು ಧರಿಸಿದ ಚತುರ್ಭುಜಪ್ರಶಸ್ತನಾಗಿಯೂ, ಕಮಲಾಕ್ಷನಾಗಿಯೂ, ವೈಜಯಂತೀ ವನಮಾಲಾವಿರಾಜಿತನಾಗಿಯೂ, ಪೀತಾಂಬರಧಾರಿಯಾಗಿಯೂ, ಮೌಕ್ತಿಕಮಾಲಿಕೆ

ಯನ್ನು ತಿರಸ್ಕರಿಸತಕ್ಕ ಶರೀರಕಾಂತಿಯುಳ್ಳವನಾಗಿಯೂ, ಸರ್ವಾಲಂಕಾರಶೋಭಿತನಾಗಿಯೂ, ಕೋಟಿಸೂರ್ಯ ಪ್ರಭಾಭಾಸಮಾನನಾಗಿ ಯದುಕುಲದಲ್ಲವತರಿಸಿದನು. ದೇವತೆಗಳು ಪುಷ್ಪವರ್ಷವನ್ನು ಸುರಿಸುತ ಪೂಮಾಲಿಕೆಗಳಿಂದ ಪೂಜಿಸಿದರು.

ಇಂತು ಜಗದಾನಂದಕರವಾಗಿ ಅವತರಿಸಿದ ಭಗವಂತನ ಲೀಲಾವಿಶೇಷವಾದ "ಶ್ರೀಕೃಷ್ಣಲೀಲೆ" ಎಂಬೀ ಗ್ರಂಥದಲ್ಲಿ ವಿವರಿಸಿರುವ ಗೋಪಿಯರು ಯಾರೆಂಬುದನ್ನು ವಿಚಾರಿಸಬೇಕಾದುದು ಅತ್ಯವಶ್ಯಕವಾದವಿಷಯವು.

"ಓಂ॥ ಶ್ರೀಮಹಾವಿಷ್ಣುಗ್ ಸಚ್ಚಿದಾನಂದಲಕ್ಷಣಗ್ ರಾಮಚಂದ್ರಂ
ದೃಷ್ಟ್ವಾ ಸರ್ವಾಂಗಸುಂದರಂ ಮುನಯೊವನವಾಸಿನೊವಿಸ್ಮಿ
ತಾ ಬಭೂವುಸ್ತಗ್ ಹೋಚುರ್ನೋವದ್ಯಮವತಾರಾನ್ವೈಗ
ಣ್ಯಂತೇ ಆಲಿಂಗಾವೋಭವಂತಮಿತಿ, ಭವಾಂತರೇಕೃಷ್ಣಾ
ವತಾರೇ ಯೂಯಂಗೋಪಿಕಾಭೂತ್ವಾಮಾಮಾಲಿಂಗಥ" ॥
(ಶ್ರೀ ಕೃಷ್ಣೋಪನಿಷತ್ತು)

ಸಚ್ಚಿದಾನಂದ ಸ್ವರೂಪನಾದ ಶ್ರೀಮನ್ನಾರಾಯಣನು ಶ್ರೀರಾಮಾವತಾರವನ್ನು ಪರಿಗ್ರಹಿಸಿ ಅರಣ್ಯವಾಸದಲ್ಲಿದ್ದಾಗ, ಸರ್ವಾಂಗ ಸುಂದರನಾದ ಶ್ರೀರಾಮಚಂದ್ರನನ್ನು ನೋಡಿ ವಿಸ್ಮಿತರಾದ ಬ್ರಹ್ಮರ್ಷಿಗಳು ಶ್ರೀರಾಮನನ್ನು ಆಲಿಂಗನಮಾಡಿಕೊಳ್ಳಬೇಕೆಂದು ಸಮ್ಮೋಹಗೊಂಡರು. ಆಗ ಪರಮಾತ್ಮನಾದ ಶ್ರೀರಾಮನು ಬ್ರಹ್ಮರ್ಷಿಗಳ ಅಭೀಷ್ಟವನ್ನರಿತು ಅವರೊಂದಿಗಿಂತೆಂದನು. ಎಲೈ ಬ್ರಹ್ಮರ್ಷಿಗಳಿರಾ! ನಿಮ್ಮಭೀಷ್ಟವನ್ನು ನಾನು ಬಲ್ಲೆನು. ಮುಂದೆ ನಾನು ಕೃಷ್ಣಾವತಾರವನ್ನು ಪರಿಗ್ರಹಿಸುವೆನು. ನೀವೆಲ್ಲರೂ ಗೋಪಿಯರಾಗಿ ಹುಟ್ಟಿರಿ. ಆಗ ನಿಮ್ಮ ಕೋರಿಕೆಯನ್ನು ಸಫಲಗೊಳಿಸುವೆನು, ಎಂದಾಣತಿಯಿತ್ತನು. ಅದರಂತೆಯೇ ವೇದಾಂತವೇದ್ಯನಾದ ಭಗವಂತನು ಶ್ರೀಕೃಷ್ಣನಾಗಿಯೂ, ಬ್ರಹ್ಮವೇತ್ತರಾದ ಋಷಿಮುನಿಗಳು ಗೋಪಿಯರಾಗಿಯೂ ಅವತರಿಸಿದರು.

ಆ ವಿವರ ವೇನೆಂದರೆ:—"ಕೃಷ್ಣೋ ಬ್ರಹ್ಮೈವಶಾಶ್ವತಂ । ರುಕ್ಮಿಣೀ ಭಾರ್ಗವೀ ಸ್ವಯಂ। ಶೇಷೋನಾಗೋಭವೇದ್ರಾಮಃ। ನಿಗಮೋ ವಸುದೇವೋಯ: । ದೇವಕೀ ಬ್ರಹ್ಮಪತ್ನೀಸಾ । ಯೋನಂದಃ ಪರಮಾನಂದಃ । ಯಶೋದಾ ಮುಕ್ತಿಗೇಹಿನೀ । ಗೋಕುಲಂ ಪರವೈಕುಂಠಂ । ಗಾವೋಋಚಃ । ಗೋಪ್ಯೋ ಬ್ರಹ್ಮವಾದಿನಃ । ವಂಶಸ್ತು ಭಗವಾನ್ ರುದ್ರಃ । ಅಂಬಿಕಾಯೋಗಮಾಯಾಸಾ । ದಯಾಸಾರೋಹಿಣೀ । ಕಲಿಃ ಕಂಸಸ್ಸಭೂಪತಿಃ । ಲೋಭಕ್ರೋಧ ಭಯಾದ್ಯೈತ್ಯಾಃ ॥ (ಶ್ರೀಕೃಷ್ಣೋಪನಿಷತ್ತು)

ಶ್ರೀಹರಿಯು ಕೃಷ್ಣನಾಗಿಯೂ, ಲಕ್ಷ್ಮಿಯು ರುಕ್ಮಿಣಿಯಾಗಿಯೂ, ಶೇಷನು ಬಲರಾಮನಾಗಿಯೂ, ಋಕ್ಕುಗಳು ಗೋವುಗಳಾಗಿಯೂ, ಋಷಿಗಳು ಗೋಪಿಯರಾಗಿಯೂ, ನಿಗಮಗಳು ವಸುದೇವನಾಗಿಯೂ, ಸರಸ್ವತಿಯು ದೇವಕಿಯಾಗಿಯೂ, ಆನಂದವು ನಂದನಾಗಿಯೂ, ಮುಕ್ತಿಕಾಂತೆಯು ಯಶೋದೆಯಾಗಿಯೂ, ವೈಕುಂಠವು ಗೋಕುಲವಾಗಿಯೂ, ಪರಮಶಿವನು ಮುರಳಿಯಾಗಿಯೂ, ಪಾರ್ವತಿಯು ಯೋಗಮಾಯೆಯಾಗಿಯೂ, ದಯೆಯು ರೋಹಿಣಿಯಾಗಿಯೂ, ಕಲಿಯು ಕಂಸನಾಗಿಯೂ, ಲೋಭ-ಕ್ರೋಧ-ಭಯಾದಿಗಳು ಮಿಕ್ಕ ರಾಕ್ಷಸರಾಗಿಯೂ ಜನಿಸಿದರು.

ಇಂತು ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನು ಲೀಲಾಮಾನುಷ ಶರೀರವನ್ನು ಪರಿಗ್ರಹಿಸಿ ಗೋಕುಲದಲ್ಲಿ ತೋರ್ಪಡಿಸಿದ ಪರಮಾದ್ಭುತ ಕಾರ್ಯಗಳು ಆದಿಯಲ್ಲಿ ಶ್ರೀ ವೇದವ್ಯಾಸರಿಂದ ಭಾಗವತರೂಪವಾಗಿ ವಿರಚಿಸಲ್ಪಟ್ಟು, ವ್ಯಾಸಪುತ್ರರಾದ, ಶ್ರೀಶುಕಾಚಾರ್ಯರಿಂದ ಪರೀಕ್ಷಿದ್ರಾಜನಿಗುಪದೇಶಿಸಲ್ಪಟ್ಟು, ವ್ಯಾಸಶಿಷ್ಯರಾದ ಸೂತಪೌರಾಣಿಕರಿಂದ ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ತಿಳುಹಿಸಲ್ಪಟ್ಟ ಈ ಪುಣ್ಯಚರಿತ್ರೆಯನ್ನು "ಶ್ರೀಕೃಷ್ಣ ಲೀಲೆ" ಎಂಬೀಗ್ರಂಥರೂಪವಾಗಿ ವಿರಚಿಸಿರುವೆನು. "ಪ್ರಮಾದೋಧೀಮತಾಮಪಿ" ಎಂಬಂತೆ, ಈ ಗ್ರಂಥದಲ್ಲಿ ಭ್ರಮಪ್ರಮಾದಾದಿಗಳು ಸೇರಿರಬಹುದು. ಪರಶ್ರೇಯೋಭಿಲಾಷಿಗಳಾದ ಪಂಡಿತರು, ರಾಜಹಂಸಗಳಂದದಿ ಸಾರವನ್ನು ಗ್ರಹಿಸಿ ಆನಂದಿಸ

ಬೇಕಾಗಿ ಪ್ರಾರ್ಥಿಸುವೆನು. ಭಕ್ತಿರಸಭರಿತವಾದ ಕವಿತ್ವರಚನೆಯಲ್ಲಿ ಅಗ್ರಗಣ್ಯರೆನಿಸಿದ ಶ್ರೀ ಪೋತನಾಮಾತ್ಯರಿಗೂ, ಶ್ರೀ ಪುರಂದರದಾಸರಿಗೂ, ವಿನಯಪೂರ್ವಕವಾಗಿ ನಮಸ್ಕರಿಸುವೆನು.

## ಸಹಾಯಕ ಪ್ರಶಂಸೆ.

"ಶ್ರೀ ಕೃಷ್ಣಲೀಲೆ" ಯೆಂಬೀ ಗ್ರಂಥವನ್ನು ಭಕ್ತಿವಿಶ್ವಾಸಗಳಿಂದ ಗೌರವಿಸಿ, ಶ್ರೀ ಕೃಷ್ಣಕಥಾಮೃತವನ್ನು ಸವಿದು ಆನಂದಿಸುತ್ತ, ತಮ್ಮಂತೆಯೇ ಭಕ್ತಜನರೆಲ್ಲರೂ ಪಠಿಸಿ ಆನಂದಿಸಬೇಕೆಂಬ ಸದುದ್ದೇಶದಿಂದ ಈ ಗ್ರಂಥಮುದ್ರಣಕ್ಕೆ ಧನಸಹಾಯವನ್ನು ಮಾಡಿರುವ ನನ್ನ ಪ್ರಿಯಮಿತ್ರರಾದ, ಬೆಂಗಳೂರು ಸಿಟಿ ದೊಡ್ಡಪೇಟೆಯಲ್ಲಿ ಕಂಬಳಿ ವರ್ತಕರಾಗಿರುವ ಶ್ರೀಯುತ ಹನುಮಪ್ಪನವರ ಕುಮಾರರು ಶ್ರೀಮಾನ್ ಸಂಜೀವಪ್ಪನವರಿಗೂ, ಇವರ ಭಾಗಸ್ಥರಾದ ಶ್ರೀಯುತ ಗಾಳಿಪ್ಪನವರಿಗೂ, ಕೃತಜ್ಞತಾ ಸೂಚಕವಾದ ನನ್ನ ಪ್ರೇಮಾರ್ಥಗಳನ್ನು ಸಮರ್ಪಿಸುತ್ತಿರುವೆನು. ಈ ಪುಣ್ಯಾತ್ಮರ ಸಹಾಯದಿಂದಲೂ, ಈ ಗ್ರಂಥವನ್ನು ಪ್ರೀತಿ ವಿಶ್ವಾಸಗಳಿಂದ ಮುದ್ರಣಕ್ಕೆ ಸ್ವೀಕರಿಸಿ, ಒಂದು ತಿಂಗಳ ಅವಧಿಯೊಳಗಾಗಿ, ಅಂದವಾಗಿ ಮುದ್ರಿಸಿಕೊಟ್ಟ ನನ್ನ ಹಿತೈಷಿಗಳಾದ ಮೆಸರ್ಸ್. ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್ ಮುದ್ರಾಕ್ಷರಶಾಲಾ ಪ್ರೊಪ್ರೈಟರವರಾದ ಮ॥ ರಾ॥ ರಾ॥ ವಿ. ಬಿ. ಶ್ರೀಕಂಠಯ್ಯನವರಿಗೂ ನನ್ನ ಮನಃಪೂರ್ವಕವಾದ ಧನ್ಯವಾದಗಳನ್ನು ಸಮರ್ಪಿಸುತ್ತಿರುವೆನು. ಸತ್ಕಾರ್ಯ ಪ್ರೋತ್ಸಾಹಕರಾದ ಈ ನನ್ನ ಹಿತಮಿತ್ರರ ಸುಹೃದ್ಭಾವವು ಶ್ರೀ ಕೃಷ್ಣಪರಮಾತ್ಮನ ಸೇವಾರೂಪವಾಗಿ, ಸದಾ ಸಂತೋಷದಾಯಕವಾಗಲೆಂದು ಹಾರೈಸುತ್ತಿರುವೆನು.

ಸರ್ವೇಜನಾಸ್ಸುಖಿನೋಭವಂತು !

ಪರಮ ಭಾಗವತರ ಪಾದಧೂಳಿ
ಕಾ. ಶಿವರಾಮದಾಸ
ಗ್ರಂಥಕರ್ತ.

# Sri Krishna

## Opinions of the Learned Pandits and Professors about Sri Krishna.

**Swami Vivekananda :—**

"People with the ideas of sex, and of money, and of fame dubbing up every minute in the heart daring to criticise and understand the love of the Gopies! That is the very essence of the Krishna incarnation Even the Gita, the great philosophy itself does not compare with that madness, for in the Gita the disciple is taught slowly how to walk towards the Goal, but here is the madness of enjoyment and drunkenness of love where disciples and teachings and teachers and books and all these things have become one, even the ideas of fear and God and Heaven.

**Mrs. Annie Besant :—**

"Sri Krishna had many bitter enemies during his life on earth, who assailed him with unmeasured violence, and brought many charges against him, but none accused him of immoral relations with women. Shishupala is a striking instance of this. In his vehement tirade against Sri Krishna in which he ranges over himself " defaming and polluting, he does accuse him of any crime of this kind. It is obvious that if his contemporaries condemned his relations with the Gopies, his enemies would have made this a chief and most effective against him".

**India in Greece (Book) :—**

"There is nothing mythological in this account of Crishna will be distinctly seen; for Crishna the son of Devaki is actually named in the Chandogya Upanishad, towards the close of the third chapter as having received instruction from Ghora, a descendant of Angiras".

**Mr. Jacolliot, President of the Court of Chandranagore :—**

"But I believe in Crishna, Philosopher and Moralist. I admire his lessons, so sublime and so pure, that later the founder of Christianity in Europe perceived that he could not do better than imitate them".

**The test of Bhagavad Gita :—**

(By Christian Missionaries)

"There are some sublime descriptions of God. He is eternal, of infinite power, of unmeasured glory, omnipresent, the source of all that exists".

"The poem is also strongly marked by the religiousness which has always characterised the Hindus".



ಶ್ರೀರಸ್ತು
ಶ್ರೀಗೋಪಾಲಕೃಷ್ಣ ಪರಬ್ರಹ್ಮಣೇನಮಃ

# ಶ್ರೀಕೃಷ್ಣಲೀಲೆ

## ಪ್ರಸ್ತಾವನೆ

**ಕರುಣಾಕರಃ— ನಾಂದೀವೃತ್ತಂ.**



ರಾಮಾಮಣಿ ರುಕ್ಮಿಣೀಮಣಿ ಮನೋಲ್ಲಾಸಂ ಸುರಾರಾಧಿತಂ।
ಪಾರಾಶರ್ಯ ವಶಿಷ್ಠ ನಾರದಮುಖ ಪ್ರಸ್ತೂಯಮಾನಂಮಹಾ।
ಕಾರುಣ್ಯಾಯತ ದಿವ್ಯಚಿತ್ತಮಮಲಂ ಕಂಜಾತಪತ್ರಾಂಬಕಂ।
ಶ್ರೀರಾಧಾರಮಣೀ ವಿನೋದನಿರತಂ ಶ್ರೀಕೃಷ್ಣಮೂರ್ತಿಂಭಜೇ ॥

ರಾಗ—ಆಂದಭೈರವಿ—ಏಕತಾಳ

ಭಜೇಮುಕುಂದಮಾಧವಂ । ನಿಜಾಶ್ರಿತಾವನಂ ॥ ಪ ॥
ಮಾರಮಣಿಮಾನಸವಿಲಾಸಸುಂದರಂ ಸಮಸ್ತದುಃಖಶೋಷಣಂ।
ಪ್ರಶಸ್ತಧರ್ಮಭೂಷಣಂ॥ ಅ ॥ ಪ ॥
ಅನಂತರೂಪಮವ್ಯಯಂ । ಅನೂನಸತ್ಯಭಾಷಣಂ। ಮನೋಜಕೋಟಿ
ಸನ್ನಿಭಂ। ದಿನೇಶಚಂದ್ರಲೋಚನಂ ॥ ಭಜೇ ॥
ಅನನ್ಯದಿವ್ಯಸುಂದರಂ । ಅಪಾರಶೌರ್ಯಮಂದಿರಂ। ಮುನೀಂದ್ರಮಾನಸಾ
ಲಯಂ। ನಮಾಮಿಲೋಕನಾಯಕಂ ॥ ಭಜೇ ॥

ಕಮಲೆ:—ಪ್ರಿಯಾ! ಈ ಸ್ತೋತ್ರವು ಯಾರನ್ನು ಕುರಿತು?

ಕರುಣಾ:—ಪ್ರಿಯೆ! ಆವ ಮಹಾಪುರುಷನ ಮುಖಾರವಿಂದದಿಂದ ಪ್ರವಹಿಸಿದ ವೇಣುನಾದಮಕರಂದವನ್ನು ಸವಿದು, ನಂದಗೋಕುಲ

ವಾಸಿಗಳಾದ ಗೋಪಾಲಕರೂ, ಗೋಪಸುಂದರಿಯರೂ, ಗೋವುಗಳೂ ಆನಂದ ಸಮುದ್ರದಲ್ಲಿ ಓಲಾಡಿದರೋ, ಅಚೇತನಗಳಾದ ತರುಲತಾದಿಗಳು ಸಹಾ ತನ್ಮಯವಾಗಿ ಪ್ರತಿಧ್ವನಿಗೈದುವೋ, ಆವ ಜಗದೇಕವಗಾಕ್ರಮಶಾಲಿಯು, ಲೋಕ ಕಂಟಕರಾದ ಕಂಸಾದಿ ದುಷ್ಟರಾಕ್ಷಸರನ್ನು ಸಂಹರಿಸಿ ಧರ್ಮಸಂಸ್ಥಾಪನೆ ಗೈದನೋ, ಆವ ಪರಬ್ರಹ್ಮನ ಲೀಲಾ ಮಾನುಷ ವಿಲಾಸವನ್ನು ಕಂಡು ಇಂದ್ರಾದಿ ಬೃಂದಾರಕರು ಸಹ ಚಕಿತರಾದರೋ, ಆ ಜಗನ್ನಾಥನಾದ ಶ್ರೀಕೃಷ್ಣ ಪರಮಾತ್ಮನನ್ನು ಕುರಿತ ಸ್ತೋತ್ರವು!

ಕಮಲೆ:—ನಾಥಾ! ವೇಣುನಾದವನ್ನು ಕೇಳಿ, ಸಚೇತನಗಳಾದ ಗೋ, ಗೋಪ, ಗೋಪಿಯರು ಆನಂದ ತುಂದಿಲರಾಗುವುದೇನೋ ಸಹಜವು! ಅಚೇತನಗಳಾದ ತರುಲತಾದಿಗಳು ಸಹ ವಿಕಾಸಹೊಂದಿ ಪ್ರತಿಧ್ವನಿ ಕೊಡಬೇಕಾದರೆ ಅಂತಹ ಗಾನವನ್ನು ಮಾಡಿದ ಶ್ರೀಕೃಷ್ಣನು ಸಾಕ್ಷಾತ್ ಪರಮಾತ್ಮನೆಂಬಲ್ಲಿ ಸಂಶಯವೇನಿದೆ? ಹಾಗಲ್ಲದಿದ್ದರೆ, ಸರ್ವವ್ಯಾಪಕತ್ವವು ವಿಶ್ವಮಯನಾದ ಭಗವಂತನಲ್ಲಿ ಹೊರತು ಅನ್ಯರಲ್ಲಿರಲಾರದಲ್ಲವೆ?

ಕರುಣಾ:—ಅಹುದು! ಆದುದರಿಂದಲೇ ವೇದವೇತ್ತರಾದ ಮಹರ್ಷಿಗಳು—

ಶ್ಲೋ॥ ಬ್ರಹ್ಮಣ್ಯೋ ದೇವಕೀಪುತ್ರೋ । ಬ್ರಹ್ಮಣ್ಯೋ ವಿಷ್ಣುರಚ್ಯುತಃ ।
ಬ್ರಹ್ಮಣ್ಯಃ ಪುಂಡರೀಕಾಕ್ಷೋ । ಬ್ರಹ್ಮಣ್ಯೋ ಮಧುಸೂದನಃ ।
ನಮೋಬ್ರಹ್ಮಣ್ಯದೇವಾಯ । ಗೋಬ್ರಾಹ್ಮಣಹಿತಾಯಚ ।
ಜಗದ್ಧಿತಾಯ ಕೃಷ್ಣಾಯ । ಗೋವಿಂದಾಯ ನಮೋನಮಃ ॥

ಎಂದು ಬಗೆಬಗೆಯಾಗಿ ಬಣ್ಣಿಸಿರುವರು.

ಕಮಲೆ:—ವೇದವೇತ್ತರಾದ ಮಹರ್ಷಿಗಳೇ ಹೀಗೆ ಸ್ತೋತ್ರ ಮಾಡಿರುವಲ್ಲಿ, ಪರಮದಯಾಕರಮೂರ್ತಿಯಾದ ಭಗವಂತನನ್ನು ಭಕ್ತಿಯಿಂದ ಭಜಿಸದವರ ಜನ್ಮವು ವ್ಯರ್ಥವಲ್ಲವೆ!

ಕರುಣಾ:—ಸಂಶಯವೇನಿದೆ?

ಶ್ಲೋ॥ ಯೇಷಾಂನವಿದ್ಯಾನತಪೋನದಾನಂ। ಜ್ಞಾನಂಚಭಕ್ತಿಶ್ಚನಶೀಲವೃತ್ತಿಃ।
ತೇಮರ್ತ್ಯಲೋಕೇಭುವಿಭಾರಭೂತಾ। ಮನುಷ್ಯರೂಪೇಣ ಮೃಗಾಶ್ಚರಂತಿ॥

ಎಂಬ ಆರ್ಯೋಕ್ತಿಯಂತೆ, ಭಗವದ್ಭಕ್ತಿಯಿಲ್ಲದ ಮನುಷ್ಯರನ್ನು ಮಾನವರೂಪದಿಂದ ಕಾಣುವ ದ್ವಿಪಾದ ಪಶುಗಳೆಂದು ಹೇಳಬಹುದು!

ಕಮಲೆ:—ಹಾಯ್! ಹಾಯ್!! ಅಂಥವರಿಗೆ ಧಿಕ್ಕಾರವಿರಲಿ!!!

ಕರುಣಾ:—ಅಂತಹ ಧಿಕ್ಕಾರವನ್ನು ನಾವುಮಾತ್ರವೇ ಹೇಳಬೇಕಾಗಿಲ್ಲವು! ಕೇವಲ ಜಡಪದಾರ್ಥಗಳು ಕೂಡಾ ಗಂಭೀರವಾಗಿ ಸಾರುತ್ತಿರುವುವು!

ಕಮಲೆ:—ಪ್ರಿಯಾ! ಅದುಹೇಗೆ?

ಕರುಣಾ:—ಪ್ರಿಯೇ! ಲಾಲಿಸು!

ಶ್ಲೋ॥ ಯೇಷಾಂಶ್ರೀಮದ್ಯಶೋದಾ ಸುತಪದಕಮಲೇನಾಸ್ತಿ ಭಕ್ತಿರ್ನರಾಣಾಂ।
ಯೇಷಾಮಾಭೀರಕನ್ಯಾಪ್ರಿಯಗುಣಕಥನೇ ನಾನುರಕ್ತಾರಸಜ್ಞಾ!
ಯೇಷಾಂ ಶ್ರೀಕೃಷ್ಣಲೀಲಾ ಲಲಿತಗುಣರಸೇಸಾದರೌ ನೈವಕರ್ಣೌ।
ಧಿಕ್‌ತಾನ್! ಧಿಕ್‌ತಾನ್!! ಧಿಗೇತಾನ್!!! ಕಥಯತಿಸತತಂ ಕೀರ್ತನಸ್ಥೋಮೃದಂಗಃ॥

ನಂದಗೋಪ ಸುಂದರಿಯಾದ ಶ್ರೀ ಯಶೋದಾಕುಮಾರನ ಪದಕಮಲಗಳಲ್ಲಿ ಭಕ್ತಿಯಿಲ್ಲದವರಿಗೂ, ಗೋಪಿಕಾ ವಲ್ಲಭನ ಗುಣಕೀರ್ತನೆಯಲ್ಲಿ ರಸಜ್ಞತೆಯಿಲ್ಲದವರಿಗೂ, ಶ್ರೀ ಕೃಷ್ಣಲೀಲೆಯನ್ನು ಕೇಳುವುದರಲ್ಲಿ ಆಸಕ್ತಿಯಿಲ್ಲದ ಕಿವಿಗಳಿಗೂ, ಧಿಕ್‌ತಾನ್! ಧಿಕ್‌ತಾನ್!! ಅಂದರೇ ಅಂತಹ ನರಪಶುಗಳಿಗೆ ಧಿಕ್ಕಾರವಿರಲಿ! ಧಿಕ್ಕಾರವಿರಲಿ!! ಧಿಕ್ಕಾರವಿರಲೆಂದು "ಮೃದಂಗವು" ಕೀರ್ತನಾರಂಭದಲ್ಲಿಯೇ ಸೂಚಿಸುತ್ತದೆ! ಆದುದರಿಂದ ನವರಸಾಲಂಕಾರ ಭರಿತವಾದ ಶ್ರೀಕೃಷ್ಣಲೀಲೆಯನ್ನು ಕೇಳುವುದರಲ್ಲಿ ಅಭಿರುಚಿಯಿಲ್ಲದವರು ಕೇವಲ ಅರಸಿಕರಾದ ನರಪಶುಗಳೆನಿಸುವರು!

ಕಮಲೆ:—ಹಾಗಾದರೆ ಶ್ರೀ ಕೃಷ್ಣಲೀಲೆಯಲ್ಲಿ, ಶೃಂಗಾರರಸ, ವೀರರಸ, ಕಾರುಣ್ಯರಸ, ಅದ್ಭುತರಸ, ಹಾಸ್ಯರಸ, ಭೀಭತ್ಸರಸ,

ರೌದ್ರರಸ, ಭಯಾನಕರಸ, ಶಾಂತರಸಗಳೆಂಬ ನವರಸಗಳೂ ತುಂಬಿರುವುವೇ?

ಕರುಣಾ:—ಪ್ರಿಯೆ-ಕೇಳು!

ರಾಗ-ಕಾಂಭೋಜಿ-ಅಟತಾಳ.

ಆವರಸಕೋರಿದರೆ ಆರಸವಿರುವುದು! ॥ಪ॥
ದೇವದೇವನ ದಿವ್ಯ ಲೀಲೆಯೊಳು ರಮಣೀ ॥ಆವರಸ॥ ಅ-ಪ॥
ಅರಸರಿಗೆ ವೀರರಸ। ವಿಪ್ರರಿಗೆ ವೇದರಸ । ಪರಮಯೋಗೀಂದ್ರರಿಗೆ ತತ್ವರಸವು। ವಿರಹಿಗಳಿಗರಿಯೆ ಶೃಂಗಾರರಸ ಕಾಣುವುದು। ಪರಮಪುರುಷನ ಚಿತ್ರ ಚರಿತೆಯೊಳು ಸುಗತೀ ॥ ಆವರಸ ॥
ಅರಿಗಳಿಗೆ ರೌದ್ರರಸ । ಗುರುಗಳಿಗೆ ಶಾಂತರಸ। ಸುರನರರೊಳಮಲರಿಗೆ ಭಕ್ತಿರಸವು ॥ ನಿರತಶಿವರಾಮ ಸಂತೋಷಕಾರಣನಾದ। ಹರಿಮುಕುಂದನು ಸರ್ವ ರಸಭರಿತನಬಲೇ ॥ ಆವರಸ॥

ಆದುದರಿಂದ ನಿಖಿಲ ರಸಾಮೃತಮೂರ್ತಿಯಾದ ಶ್ರೀ ಕೃಷ್ಣಪರಮಾತ್ಮನನ್ನು ಯಾರು ಯಾರು ಯಾವತೆರನಾಗಿ ಭಾವಿಸುವರೋ ಅವರವರಿಗೆ ಆಯಾತೆರನಾದ ರಸವೇ ಕಾಣುವುದು! ಆಶ್ರಿತರಿಗೆ ಕಲ್ಪತರುವಾದ ಶ್ರೀ ಕೃಷ್ಣಮೂರ್ತಿಯಲ್ಲಿ ನಿಷ್ಕಳಂಕವಾದ ಭಕ್ತಿಯುಳ್ಳವರಿಗೆ, ಆತನು ಅಪ್ರಾಕೃತ ದಿವ್ಯಮಂಗಳಮೂರ್ತಿಯಾಗಿಯೇ ಕಾಣುವನು!

ಕಮಲೆ:—ಪ್ರಿಯಾ! ಹಾಗಾದರೆ ನಾವು ಧನ್ಯರೇ ಸರಿ! ಪರಮಪಾವನವಾದ ಗಂಗಾಜಲವು ಸುಲಭ ಸಾಧ್ಯವಾಗಿ ಲಭಿಸುವಲ್ಲಿ ಅದನ್ನು ತೊರೆದು, ಕೆಸರುಗುಂಡಿಯ ನೀರನ್ನು ಬಯಸತಕ್ಕವರು ಮಂದಮತಿಗಳಲ್ಲವೆ?

ಕರುಣಾ:—ಆಮಾತಿನಲ್ಲಿ ಸಂಶಯವೇನಿದೆ?

ಕಮಲೆ:—ಪರಂತು ಸತ್ಕಾಲಕ್ಷೇಪವಿನೋದಿಗಳೂ, ಅನನ್ಯವಾದ ಭಗವದ್ಭಕ್ತಿಯುಳ್ಳವರೂ, ರಸಜ್ಞಶೇಖರರೂ ಆದ ಸಭ್ಯಮಹಾಶಯರನ್ನು "ಶ್ರೀ ಕೃಷ್ಣಲೀಲೆ" ಯಿಂದಲೇ ಸಂತೋಷಪಡಿಸಬಹುದಲ್ಲವೆ?

ಕರುಣಾ:—ನಿಶ್ಚಯ! ಹಾಗೆಯೇ ಮಾಡೋಣ!

ಎಂದು ಮಾತನಾಡುತ್ತಿರುವಾಗ್ಗೆ ವೀಣಾಗಾನವು ಕೇಳಿಸುವುದು.

ನಾರದ:— ಮಂಗಳಸ್ತುತಿ.

ಕಾಂಭೋಜಿ ಅಥವಾ ಆರಭಿರಾಗ.

ಪಾಹಿ ಶ್ರೀ ವರಜಗನ್ನಾಥಾ ॥ಪ॥ ಪಾಹಿಪರಮಾನಂದದಾತಾ ॥ಅ-ಪ॥ ನವವಿಕಚ ಸರಸಿರುಹ। ನಯನಯುಗಸುರವಿನುತ, ಗಗನಚರನದಿಜನಕ। ಪರಮಚರಣ ॥ ಜಲಧಿಸುತ ಕುಚಕಲಶ ಲಲಿತಮೃಗಮದರುಚಿರ। ಪರಿಮಿಳಿತ ನಿಜಹೃದಯ ಧರಣಿಭರಣಾ ॥ಪಾಹಿ॥ ॥೧॥ ದ್ರುಹಿಣಮುಖ ಸುರನಿಕರ ವಿಹಿತನುತಿ ಕಲಿತಗುಣ। ಕಟಿಘಟಿತ ರುಚಿರತರ ಕನಕವಸನ। ಭುಜಗಪತಿ ವರಶಯನ ರಜತಗಿರಿ ಪತಿವಿನುತ, ಸತತಜಪತಪನಿಯಮ ಸುಜನವರದಾ॥ಪಾಹಿ ॥ ೨ ॥ ತಿಮಿಕಮಠ ಕಿಟನೃಹರಿ। ಮುದಿತ ಬಲಿನಿಹಿತಪದ, ಪರಶುಧರ ದಶವದನ ದನುಜದಳನ। ಮುರದಮನ ಕಲಿಕಲುಷ ತತಿಹರಣ। ಕರಿವರದ, ಪರಮಮುನಿನುತ ಚರಿತ ಗರುಡಗಮನಾ ॥ಪಾಹಿ ॥೩॥

ಕರುಣಾ:—ಪ್ರಿಯೇ! ಬ್ರಹ್ಮಮಾನಸಪುತ್ರರೂ, ತ್ರಿಲೋಕಸಂಚಾರಿಗಳೂ, ಸಂತತ ನಾರಾಯಣ ಧ್ಯಾನ ಪರಾಯಣರೂ, ಗಾನವಿದ್ಯಾವಿಶಾರದರೂ ಆದ ನಾರದ ಮಹರ್ಷಿಗಳು, ಭಗವಂತನ ಸಂದರ್ಶನಾರ್ಥವಾಗಿ ವೈಕುಂಠಕ್ಕೆ ತೆರಳುವಂತೆ ಕಾಣುತ್ತದೆ! ಆದ ಪ್ರಯುಕ್ತ ನಾವಿನ್ನು ಸಾವಕಾಶಮಾಡದೆ ಪರಮಾತ್ಮನ ಸೇವೆಯಲ್ಲಿ ನಿರತರಾಗುವುದು ಶ್ರೇಯಸ್ಕರವು!

ಕಮಲೆ:—ಮಹದಾಜ್ಞೆ!

(ಎಂದು ನಿಷ್ಕ್ರಮಿಸುವರು.)

ಇದು ಪ್ರಸ್ತಾವನೆ.

ಭಕ್ತವತ್ಸಲಾಯನಮಃ.



ಶ್ರೀರಸ್ತು

# ಶ್ರೀಕೃಷ್ಣಲೀಲೆ

## ಪ್ರಥಮಾಂಕಂ

### ಪ್ರಥಮರಂಗಂ.

**ನಾರದಮಹಾರುಷಿಗಳು ವೀಣಾಗಾನಮಾಡುತ್ತಾ ಪ್ರವೇಶಿಸುವರು**

ರಾಗ ಮಧ್ಯಮಾವತಿ—ಅಥವಾ ಮೋಹನ—ಏಕತಾಳ

ಜಲಧಿಸದನ । ದುರಿತಶಮನ । ಪರಮಪಾವನ ॥ ಪ ॥
ಕಲಿತಸುಗುಣ । ಲಲಿತವದನ । ಪರಮಚರಣ । ದನುಜಹರಣ ॥ ಅ ॥ಪ॥
ಮಂಗಳಾಂಗಮಾಧವಶೌರೀ । ಮೌನೀಂದ್ರವಿಮಲಮಾನಸ ಸಿಹ್ಮಾಸನ
ನಿಲಯಾ । ಸೌಭಾಗ್ಯಧಾತ ಸಂತತಶಿವರಾಮತೋಷಣಾ । ಕಮಲಾರ್ಚಿ
ತ ವಿಮಲಾಂಚಿತ ಕಮನೀಯಗುಣಾಭರಣಾ । ಸಮಸುಶೀಲ ಸುಜನಪಾಲ
ಶ್ರುತಿವಿಲೋಲ ಪಾಲಯಶ್ರೀ ॥ಜಲಧಿ॥

ಆಹಾ! ಭಗವಂತನ ಕಲ್ಯಾಣಗುಣಗಳನ್ನು ಸಂಪೂರ್ಣವಾಗಿ ಬಣ್ಣಿಸಲು ನನ್ನಿಂದಾಗಬಲ್ಲದೇ? ಎಷ್ಟುಬಣ್ಣಿಸಿದರೂ ಮತ್ತಷ್ಟು ಅಗಾಧವಾಗಿಯೇ ತೋರುವುದು. ಚತುರ್ಮುಖನಾದ ಬ್ರಹ್ಮನಿಗೂ, ಷಣ್ಮುಖನಾದ ಕುಮಾರನಿಗೂ, ಸಹಸ್ರಮುಖನಾದ ಆದಿಶೇಷನಿಗೂ ಸಹಾ ಅಸಾಧ್ಯವಾಗಿರುವಲ್ಲಿ ನನ್ನಂಥವನಿಗೆ ಸಾಧ್ಯವೇ? ಎಂದಿಗೂ ಸಾಧ್ಯವಲ್ಲ! ಆದಾಗ್ಯೂ ಪರಂಧಾಮನು ಕರುಣಾಸಮುದ್ರನಾದುದರಿಂದ ಭಕ್ತರು ತಮ್ಮ ಶಕ್ತ್ಯಾನುಸಾರವಾಗಿ ಮಾಡತಕ್ಕ ಸ್ಮರಣೆಗೆ ಸಂತುಷ್ಟನಾಗಿ, ತನ್ನ ಅವ್ಯಾಜಕಾರುಣ್ಯದಿಂದ ಕಟಾಕ್ಷಿಸತಕ್ಕವನಾದಕಾರಣ ಭಕ್ತರಿಗೆ ಸುಲಭಸಾಧ್ಯನಾಗಿರುವನು. ಇಂತಹ ಪರಮ ಕಾರುಣ್ಯಮೂರ್ತಿಯ ವಾತ್ಸಲ್ಯವನ್ನರಿಯದೆ "ಕಂಸಾದಿ ದುಷ್ಟ ರಾಕ್ಷಸರು" ವಿಪರೀತದ

ಗರ್ವದಿಂದಕೊಬ್ಬಿದವರಾಗಿ ಗೋಬ್ರಾಹ್ಮಣರೇಮುಂತಾದ ಸಾಧುಸಜ್ಜ ನರನ್ನು ಬಾಧಿಸುತ್ತ, ಪತಿವ್ರತೆಯರಾದ ಸ್ತ್ರೀಯರನ್ನು ಭಂಗಪಡಿಸುತ್ತ ತಮ್ಮ ಪ್ರತಾಪಕ್ಕೆ ಎದುರಿಲ್ಲವೆಂಬ ಧೈರ್ಯದಿಂದ ಮೆರೆಯುತ್ತಿರುವರು. ಕಂಸ, ನರಕ, ಶಿಶುಪಾಲ, ಜರಾಸಂಧಾದಿ ದುಷ್ಟರಕ್ಕಸರ ಬಾಧೆಯನ್ನು ತಾಳಲಾರದೆ ಬ್ರಹ್ಮೇಂದ್ರಾದಿ ದೇವತೆಗಳು ಕ್ಷೀರಸಾಗರಕ್ಕೆ ತೆರಳುತ್ತಿರುವರು. ಈಗಿನ ಸಂದರ್ಭವು, ಭಗವಂತನು ಭೂಲೋಕದಲ್ಲವತರಿಸಿ ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುವುದಕ್ಕೆ ತಕ್ಕುದಾಗಿರುವುದು. ನಾನು ಸಮಯೋಚಿತವಾಗಿ ಕಂಸಾದಿ ದುಷ್ಟಜಂತುಗಳನ್ನು ಹುರಿಗೊಳಿಸಿ ಅವರನ್ನು ಭಗವಂತನಿಂದ ನಿರ್ಮೂಲ ಮಾಡಿಸುತ್ತೇನೆ; ಈ ಮೂಲಕ ಸಾಧುಸಜ್ಜನರಿಗೂ ಪತಿವ್ರತಾ ಸ್ತ್ರೀಯರಿಗೂ ಕ್ಷೇಮವುಂಟಾಗಲಿ! ನಾನು ಈಗಲೇ ವೈಕುಂಠಕ್ಕೆ ತೆರಳಿ ಇಂದಿರಾರಮಣನನ್ನು ಸಂದರ್ಶಿಸುವೆನು;

ಎಂದು ವೀಣಾಗಾನ ಮಾಡುತ್ತಾ ತೆರಳುವರು.

---

## ದ್ವಿತೀಯರಂಗಂ

**ಪ್ರದೇಶ:— ಕ್ಷೀರಸಾಗರ.**

**ಶ್ರೀಮನ್ನಾರಾಯಣನು ಲಕ್ಷ್ಮೀಸಮೇತನಾಗಿ ಶೇಷ ಪರ್ಯಂಕದಲ್ಲಿ ಪವಡಿಸಿರುವನು. ಬ್ರಹ್ಮಾದಿ ದೇವತೆಗಳು ಸ್ತುತಿಸುತ್ತಿರುವರು.**

ರಾಗ— ಹಿಂದುಸ್ಥಾನಿಕಾಪಿ—ಆದಿ

ದೇವಸಕಲಾಧಾರಾ । ಅಪಾರಾ ॥ ಪ ॥
ಪಾವನಗುಣಯುತ ಪರಮವಿನೋದ ॥ ದೇವ ॥ ಅ ॥ ಪ ॥ [ದೇವ॥
ದಾನವಾಳಿವಿರಾಮಾ । ಸುನಾಮಾ । ಮಾನಿತಸಜ್ಜನ ಮಂಜುಳಭಾಷಣ॥
ಶ್ರೀವರಾಮರಪಾಲಾ । ಸುಶೀಲಾ । ಭಾವಜಪಿತಶಿವರಾಮವಿಲೋಲ॥ದೇವ॥

ಇಂದ್ರ:— ಶ್ಲೋ॥ ಯಜ್ಞೇಶಾಚ್ಯುತಗೋವಿಂದ ಮಾಧವಾನಂತಕೇಶವ ।
ವಿಷ್ಣುಜಿಷ್ಣುಹೃಷೀಕೇಶವಾಸುದೇವನಮೋಸ್ತುತೇ ॥

ಬೃಹಸ್ಪತಿ:— ಶ್ಲೋ॥ ಸಶಂಖಚಕ್ರಂ ಸಕಿರೀಟಕುಂಡಲಂ। ಸಪೀತವಸ್ತ್ರಂ ಸರಸೀ ರುಹೇಕ್ಷಣಂ। ಸಹಾರವಕ್ಷಸ್ಥಲಶೋಭಿಕೌಸ್ತುಭಂ ನಮಾಮಿವಿಷ್ಣುಂ ಶಿರಸಾಚತುರ್ಭುಜಂ॥

[ಎಂದು ಸ್ತೋತ್ರಮಾಡುತ್ತಾ ಎಲ್ಲರೂ ಸಾಷ್ಟಾಂಗವಾಗಿ ನಮಸ್ಕರಿಸುವರು.]

ವಿಷ್ಣುವು:—ಮಹಾತ್ಮರೇ! ಎಲ್ಲರೂ ಸುಖಾಸೀನರಾಗಿರಿ. ಕಮಲಾಸನಾ! ಈಪೀಠವನ್ನಲಂಕರಿಸು. ನಾರದಾ! ಈ ಪೀಠದಲ್ಲಿ ಕುಳಿತುಕೊ. ದೇವನಾಯಕಾ! ನಿನಗೆ ಕುಶಲವೇ? ಸುರಗುರುವೇ! ನಿನಗೆ ಸೌಖ್ಯವೇ? ಬೃಂದಾರಕರೇ! ನೀವೆಲ್ಲರೂ ಕ್ಷೇಮವಾಗಿರುವಿರಾ?

ಬೃಹಸ್ಪತಿ:—ಭಗವಂತನೇ! ನಿನ್ನ ಕೃಪಾರಸದಿಂದ ನಾವೆಲ್ಲರೂ ಕುಶಲರಾಗಿರುವೆವು.

ವಿಷ್ಣುವು:—ಎಲೈ, ಮಹೇಂದ್ರನೇ! ನಿನ್ನ ಅಧಿಕಾರವು ನಿರಾತಂಕವಾಗಿ ಸಲ್ಲುತ್ತಿರುವುದೇ? ನೀವೆಲ್ಲರೂ ಜತೆಗೂಡಿ ಇಷ್ಟುದೂರ ಬರಬೇಕಾದರೇ ಏನೋವೊಂದು ಮಹಾತ್ಕಾರ್ಯ ಇರಬೇಕು. ಸೃಷ್ಟಿಕಾರ್ಯ ನಿರತನಾದ ಚತುರ್ಮುಖನುಕೂಡಾ ನಿಮ್ಮೊಂದಿಗೆ ಬಂದಿರುವುದನ್ನು ನೋಡಿದರೆ, ಘನತರವಾದ ಕಾರ್ಯವಾವುದೋ ಇದ್ದೇ ತೀರಬೇಕು.

ಬ್ರಹ್ಮ:—ಸರ್ವಜ್ಞನೇ! ನೀನರಿಯದ ಕಾರ್ಯವಾವುದು?

ಇಂದ್ರ:—ಆಶ್ರಿತಕಲ್ಪತರುವಾದ ಪರಮಾತ್ಮನೇ! ನಿನ್ನಪ್ಪಣೆಯಿಲ್ಲದೆ ತೃಣವು ಕೂಡಾ ಚಲಿಸಲಾರದೆಂಬಲ್ಲಿ, ನಿನಗೆ ತಿಳಿಯದ ವಿಷಯವಾವುದು; ಎಲ್ಲವನ್ನೂ ತಿಳಿದ ನೀನೇ ಹೀಗೆ ಕೇಳಿದರೆ ನಾವೇನು ಹೇಳಬಲ್ಲೆವು!

ವಿಷ್ಣುವು:—ನಾರದಾ! ಈ ವಿಚಾರವನ್ನು ಪರಿಷ್ಕಾರವಾಗಿ ವಿವರಿಸತಕ್ಕ ಕುಶಲನು ನೀನೇಸರಿ!

ನಾರದ:—ದೇವಾ! "ಪುಷ್ಪಮೂಲಾನುಸಂಗೇಣಸೂತ್ರಂ ಶಿರಸಿಧಾರ್ಯತೇ" ಹೂವಿನಿಂದ ನಾರಿಗೆ ಸನ್ಮತಿ ಯುಂಟಾಗುವಂತೆ, ಮಹಾತ್ಮರ ಅನುಗ್ರಹದಿಂದ ಸಾಮಾನ್ಯರಿಗೆ ಕೂಡಾ ಗೌರವವುಂಟಾಗು

ವುದರಲ್ಲಿ ಸಂಶಯುವೇನಿದೆ ? ಪರಂತು ಜಗದ್ರಕ್ಷಕನಾದ ನಿನ್ನ ಅನುಗ್ರಹಕ್ಕೆ ಪಾತ್ರನಾಗಬೇಕಾದರೆ ನಾನು ಭಾಗ್ಯಶಾಲಿಯೇ ಸರಿ! ಜಗನ್ನಾಥಾ! ಬಿನ್ನವಿಸುವೆನು :

ರಾಗ–ದರ್ಬಾರ್–ರೂಪಕ.

ಲಾಲಿಸೈ ರಮಾರಮಣನೆ। ಪೇಳುವೆನು ಪ್ರಸಕ್ತವಿಷಯ ! ॥ಪ॥
ಕೂಳರಾದ ಕಂಸಶಿಶುಪಾಲಾದಿಗಳದುರಾಗತವನು ॥ಲಾ॥ ಅ-ಪ॥
ದುರುಳದನುಜರೆಲ್ಲಕೂಡಿ। ಸುರಪತಿಯನು ಕಾಡಿಸುವರು।
ವರಪತಿವ್ರತೆಯರ ಕೆಡಿಸು। ತಿರುವ ಪರಿಯನೊರೆವೆನೀಗ ॥ಲಾಲಿಸೈ॥
ಯಜ್ಞಯಾಗಗಳನು ತಡೆದು। ಭಗ್ನಮಾಡುತಿರುವರವರ।
ನಿಗ್ರಹಕ್ಕೆಬೆದರುತಿಹರು। ಯಜ್ಞಗೈವರಿಲ್ಲವಯ್ಯ ॥ಲಾಲಿಸೈ॥
ಭವವಿದೂರ ದೇವದೇವ। ಪ್ರವಿಮಲಾತ್ಮಸಾಧುಪೋಷ।
ಶಿವರಾಮದಾಸವಿನುತ। ಅವಧರಿಸು ಮಹಾನುಭಾವಾ ॥ಲಾಲಿಸೈ॥

ಭಗವಂತನೆ! " ಪರಿತ್ರಾಣಾಯ ಸಾಧೂನಾಂ। ವಿನಾಶಾಯಚ ದುಷ್ಕೃತಾಂ।
ಧರ್ಮಸಂಸ್ಥಾಪನಾರ್ಥಾಯ। ಸಂಭವಾಮಿ ಯುಗೇ ಯುಗೇ ॥"

ಎಂಬ ನಿನ್ನ ಸನಾತನ ಧರ್ಮವಾಕ್ಯವು ಈ ಸಂದರ್ಭದಲ್ಲಿ ನನ್ನ ನೆನಪಿಗೆ ಬಂದಿರುತ್ತದೆ. ಲಕ್ಷ್ಮೀರಮಣಾ! ದುಷ್ಟರನ್ನು ಶಿಕ್ಷಿಸುವುದಕ್ಕೂ, ಶಿಷ್ಟರನ್ನು ರಕ್ಷಿಸುವದಕ್ಕೂ ಧರ್ಮವನ್ನು ನೆಲೆಗೊಳಿಸುವುದಕ್ಕೂ ನೀನಲ್ಲದೆ ಮತ್ತಾರಿರುವರು! ಅನಂತಾ! ನಿನ್ನಂತರಂಗದಲ್ಲಿ ಸಂಕಲ್ಪಿಸಿದೆಯಾದರೆ, ಅಣುಮಾತ್ರವಾದ ಸಣ್ಣ ಪದಾರ್ಥವೇ ಬ್ರಹ್ಮಾಂಡವಾಗಿ ಪರಿಣಮಿಸುವುದು. ನಿನ್ನಪ್ಪಣೆಯಾದರೆ ಕ್ಷಣಮಾತ್ರದಲ್ಲಿಯೇ ಮೇರುಪರ್ವತವುಕೂಡಾ ತೃಣಮಾತ್ರವಾಗುವುದು! ದೇವಾ! ನೀನು ಸರ್ವಶಕ್ತನು! ಸರ್ವವ್ಯಾಪಕನು! ಸರ್ವಾಂತರ್ಯಾಮಿಯು! ಸರ್ವತಂತ್ರ ಸ್ವತಂತ್ರನು! ಸರ್ವಾಧಿಕಾರ ಸಂಪನ್ನನು! ಜಗದೇಕ ಚಕ್ರವರ್ತಿಯು! ನಿನ್ನಿಷ್ಟನಿದ್ದಂತೆ ನಡಿಸು! ನಿನ್ನ ಚಿತ್ತವು!! ನಮ್ಮ ಭಾಗ್ಯವು !!!

ವಿಷ್ಣುವು:—ನಾರದಾ! ನಿನ್ನ ಮನೋಭಾವವು ನಿಷ್ಕಳಂಕವಾದುದು! ನೀನು ಧನ್ಯತಮನು! ನಿನ್ನಿಷ್ಟವನ್ನು ನಾನರಿತೆನು. ಹಾಗೆಯೇ ನಡಿಸುವೆನು!

ನಾರದ:—ಮಹದಾಜ್ಞೆ!

ಭೂದೇವಿ:— ರಾಗ-ಆರಭಿ (ಲಲಿತಪದಿ)

ಜಯಜಯ ಸರ್ವೇಶ ಜಯಪಾಪನಾಶ । ಜಯಸತ್ಯ ಚಾರಿತ್ರ ಜಯವಿಶ್ವ ಗಾತ್ರ। ಜಯಶಾಂತಗಂಭೀರ ಜಯಮಹಾಧೀರ। ಜಯನತಾವ:ರಬೃಂದ। ಜಯಚಿದಾನಂದ। ಜಯಸತ್ಯಸಂಕಲ್ಪ ಜಯಸತ್ಪ್ರತಾಪ। ಜಯ ಕೃಪಾರಸಧಾಮ ಜಯಸಾರ್ವಭೌಮ। ಜಯಧರ್ಮಗುಣಭೂಪ ಜಯಸಾಧುಪೋಷ। ಜಯಜಯಸರ್ವಜ್ಞ ಜಯನಿರ್ಗಳಾಜ್ಞ । ಜಯಭಕ್ತಮಂದಾರಜಯ ಶುಭಾಕಾರ । ಸಗುಣನಿರ್ಗುಣಪೂರ್ಣ ಸರ್ವಸಂತ್ರಾಣ । ನಿಖಿಲ ಸಜ್ಜನ ರಕ್ಷ ನಿರಪಾಯಪಕ್ಷ । ದೀನಚಿಂತಾಮಣೀ ಧೃತಧರ್ಮಪಾಣಿ। ಭವಬಂಧಮೋಚನ ಪರಮ ಕಲ್ಯಾಣ। ಸರಸಗುಣಾಢ್ಯ ಸಜ್ಜನಮಾನರಕ್ಷ। ವೇದ ವೇದಾಂತ ವೇದಾಂಗಗಳುನೀನೆ ! ಕ್ರತುಗಳು ನೀನೆ ಸದ್ವ್ರತಗಳು ನೀನೆ। ಬಲ್ಲೆಯೆಲ್ಲವನೀನು ಪಾವನಮೂರ್ತಿ। ಕಂಸಾದಿದುಷ್ಟರಾಕ್ಷಸರ ಹಾವಳಿಯು। ಮಿತಿಮೀರಿ ಸಲ್ಲುತಿಹುದು ದೇವದೇವ। ದುರುಳರಾದವರ ಸೊಕ್ಕಡಗಿಸಿ ಬೇಗ। ಕುಶಲದಿ ಪಾಲಿಸೆಮ್ಮನು ಪ್ರಾಣನಾಥ। ಜಯವಿಶ್ವನಾಥ ಸಜ್ಜನವಾರನೇತ ॥

(ಎಂದು ಭೂದೇವಿಯು ನಮಸ್ಕರಿಸುವಳು.)

**ವಿಷ್ಣುವು:—** ಕಂ॥ ಧರಣೀ ರಮಣೀ ಸಿನ್ನಯ।
ಪರಿತಾಪವುನೀಗಿ ಸುಖವ ಪಡೆಯುವೆ ಸುಗುಣೀ ॥
ನೆರೆಸೈಸು ಕೆಲದಿನಗಳೊಳ್ ।
ದುರುಳರ ಶಿಕ್ಷಿಪೆನು ಕೃಷ್ಣರೂಪದಿ ನಿಕ್ಕಂ ॥

ಭೂದೇವಿ :—(ತನ್ನಲ್ಲಿ) ಆಹಾ ! ಭಗವಂತನೆಷ್ಟು ದಯಾಕರ ಮೂರ್ತಿಯು! ನನ್ನ ದೀನಾಲಾಪವನ್ನು ಪರಮಶಾಂತದಿಂದ ಲಾಲಿಸಿದುದೇ ನನಗೆಷ್ಟೋ ಗೌರವವು. ಅದಕ್ಕೆ ನೆರೆಯಾಗಿ ನನ್ನನ್ನು "ಧರಣೀ! ರಮಣೀ!! ಸುಗುಣೀ !!! ಎಂದು ಸಂಬೋಧಿಸಿದುದನ್ನು ಯೋಚಿಸಿದರೆ, ಈ ಭಾಗ್ಯವು ಬ್ರಹ್ಮಾದಿಗಳಿಗೂ ಇಲ್ಲವೆಂದು ಕಾಣುತ್ತದೆ. ನಾನೇ ಧನ್ಯಳು! ನಾನೇ ಗಣ್ಯಳು!! ನಾನೇ ಮಾನ್ಯಳು!!! (ಎಂದು ಸಂತೋಷಿಸುತ್ತ, ಭಗವಂತನನ್ನು ನೋಡಿ ಪ್ರಕಾಶವಾಗಿ) ಪರಂಧಾಮನೇ! ಪ್ರಪಂಚದ ಹೊರಗೂ ಒಳಗೂ ಸಹ ವ್ಯಾಪಿಸಿ, ಜೀವಕೋಟಿಗಳ ಅಂತರಂಗದಲ್ಲಿರುವ ನಿಜವಾದ ವಿಶ್ವಾಸವನ್ನರಿಯತಕ್ಕ ಸರ್ವಜ್ಞನಾದ ನಿನಗೆ ನಾನೇನು ಹೇಳಬಲ್ಲೆನು? ನಿನ್ನಿಷ್ಟಾನುಸಾರ ನಡೆಯಲಿ

ವಿಷ್ಣುವು:—ಕಲ್ಯಾಣೀ! ನಿನಗೆ ಮಂಗಳವಾಗಲಿ! [ಎಂದು ಆಶೀರ್ವದಿಸಿ ದೇವತೆಗಳೊಂದಿಗೆ ಮಾತನಾಡುವನು] ಕಮಲಾಸನಾ! ದೇವೇಂದ್ರಾ! ಸುರಗುರುವೇ! ದೇವಮುನಿಗಳಿರಾ! ತ್ರಿಕಾಲಜ್ಞನಾದ ನಾರದ ಮಹರ್ಷಿಯೂ, ಭೂದೇವಿಯೂ ಹೇಳಿದ ವಿಚಾರವನ್ನೆಲ್ಲಾ ಕೇಳಿದಿರಲ್ಲವೆ? ಕಂಸಾದಿ ದುಷ್ಟ ರಾಕ್ಷಸರ ದುಷ್ಕೃತ್ಯಗಳನ್ನು ನಾನು ಬಲ್ಲೆನು. ಆದಾಗ್ಯೂ ಸಮಯವನ್ನು ಪ್ರತೀಕ್ಷಿಸುತ್ತಿದ್ದೆನು. ಈಗ ನಾನು ಭೂಲೋಕದಲ್ಲಿ ಅವತರಿಸುವುದಕ್ಕೆ ತಕ್ಕ ಸಮಯವು ಒದಗಿರುತ್ತದೆ. ಆದುದರಿಂದ, ನನ್ನ ಭಕ್ತರಾದ ದೇವಕೀ ವಸುದೇವರಿಗೆ ಪುತ್ರನಾಗಿ ಯದುಕುಲದಲ್ಲವತರಿಸುವೆನು. ಲಕ್ಷ್ಮಿಯು ರುಕ್ಮಿಣಿಯಾಗವತರಿಸಿ ನನ್ನನ್ನು ವರಿಸುವಳು. ಆದಿಶೇಷನು ಬಲರಾಮನಾಗಿ ಅವತರಿಸಿ ನನಗಗ್ರಜನಾಗುವನು. ಪರಾಶಕ್ತಿಯಾದ ಯೋಗಮಾಯೆಯು ನಂದಗೋಕುಲದಲ್ಲವತರಿಸಿ ನನ್ನಾಜ್ಞೆಯನ್ನು ಪರಿಪಾಲಿಸುವಳು. ದೇವತೆಗಳೆಲ್ಲರೂ ಯಾದವರಾಗಿ ಜನಿಸಲಿ. ಕಮಲಾಸನಾ! ಸಮಯೋಚಿತ ಕಾರ್ಯಕರಣದಲ್ಲಿ ಎಲ್ಲರೂ ದಕ್ಷರಾಗಿರುವಂತೆ ಮಾಡಬೇಕು. ದೇವತೆಗಳಿರಾ! ಮುನಿಗಳಿರಾ! ನೀವಿನ್ನು ನಿರ್ಭೀತರಾಗಿರಬಹುದು!

(ಎಂದು ಅಭಯಹಸ್ತವನ್ನು ಅನುಗ್ರಹಿಸುವನು.)

ಋಷಿಗಳು-ದೇವತೆಗಳು:—(ಕೈಮುಗಿದು) ಮಹಾಭಾಗ್ಯವು! ಅಪ್ಪಣೆಯಂತೆ ನಡೆದುಕೊಳ್ಳುವೆವು!

[ಎಂದು ಬಿನ್ನವಿಸಿ, ಎಲ್ಲರೂ ನಿಷ್ಕ್ರಮಿಸುವರು.]




ಲೀಲಾವಿನೋದಾಯನಮಃ!!!

ಶ್ರೀರಸ್ತು.

# ಶ್ರೀ ಕೃಷ್ಣಲೀಲೆ

## ದ್ವಿತೀಯಾಂಕಂ.

### ಪ್ರಥಮರಂಗಂ.

ಪ್ರದೇಶ:— ಮಧುರಾ ಪಟ್ಟಣ
ಕಲ್ಯಾಣಮಂಟಪ.

[ಮಧುರಾಪುರದರಸನಾದ ಉಗ್ರಸೇನನು ತನ್ನ ಪುತ್ರಿಯಾದ ದೇವಕಿಯನ್ನು, ಶೂರಸೇನನ ಪುತ್ರನಾದ ವಸುದೇವನಿಗೆ ಕೊಟ್ಟು ವಿವಾಹ ಮಹೋತ್ಸವವನ್ನು ನಡಿಸುತ್ತಿರುವನು. ಪುರೋಹಿತರು ವೇದ ಮಂತ್ರಗಳನ್ನು ಪಠಿಸುತ್ತಿರುವರು. ಸುಮಂಗಲಿಯರು ಮಂಗಳ ಗೀತವನ್ನು ಹಾಡುತ್ತಿರುವರು. ಮಂತ್ರಿಸಾಮಂತರು ಸುತ್ತಲೂ ಕುಳಿತಿರುವರು. ಕಂಸನು ತಂಗಿಯ ಬಳಿಯಲ್ಲಿ ನಿಂತಿರುವನು.]

ಪುರೋಹಿತರು:—

ಶ್ರುತಿ॥ ಧ್ರುವಂತೇರಾಜಾವರುಣೋಧ್ರುವಂ ದೇವೋಬೃಹಸ್ಪತಿಃ । ಧ್ರುವಂತ ಇಂದ್ರಶ್ಚಾಗ್ನಿಶ್ಚ ರಾಷ್ಟ್ರಂಧಾರಯತಾಂ ಧ್ರುವವ್ ॥

ಶ್ರೀ ಲಕ್ಷ್ಮೀನಾರಾಯಣಾಭ್ಯಾಂನಮಃ । ವಾಣೀಹಿರಣ್ಯಗರ್ಭಾಭ್ಯಾಂನಮಃ ಉಮಾಮಹೇಶ್ವರಾಭ್ಯಾಂನಮಃ । ಶಚೀಪುರಂದರಾಭ್ಯಾಂ ನಮಃ । ಮಾತಾ ಪಿತೃಭ್ಯಾಂನಮಃ । ಇಷ್ಟದೇವತಾಭ್ಯೋನಮಃ । ಸರ್ವೇಭ್ಯೋಮಹದ್ಭ್ಯೋ ನಮಃ ! ॥

ಶ್ಲೋ॥ ತದೇವಲಗ್ನಂ ಸುದಿನಂತದೇವ ! ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂದೈವಬಲಂತದೇವ ! ಲಕ್ಷ್ಮೀಪತೇತೇಂಘ್ರಿಯುಗಂಸ್ಮರಾಮಿ॥

ಉಗ್ರಸೇನ:—(ವಸುದೇವನನ್ನು ಕುರಿತು)

ಮಮಪುತ್ರೀಂ, ದೇವಕೀನಾಮ್ನೀಂ ಕನ್ಯಾಂ, ವರಾರ್ಥಿನೀಂ, ಶ್ರೀರೂಪಿಣೀಂ ಹಿರಣ್ಯಗರ್ಭದೈವತ್ಯಾಂ। ಧರ್ಮಾರ್ಥಾದಿ ಚತುರ್ವಿಧ ಪುರುಷಾರ್ಥ ಸಾಧನಾರ್ಥಂ. ತುಭ್ಯಮಹಂ ಸಂಪ್ರದದೇನಮಮ ! ॥

ನನ್ನ ಮಗಳಾದ ದೇವಕಿಯೆಂಬ ಹೆಸರುಳ್ಳವಳನ್ನು (ವರನನ್ನು ಅಪೇಕ್ಷಿಸುತ್ತಿರುವ) ಲಕ್ಷ್ಮೀಸ್ವರೂಪಿಣಿಯಾದ ಈಕನ್ಯೆಯನ್ನು, ಧರ್ಮ ಅರ್ಥ ಮುಂತಾದ ಚತುರ್ವಿಧ ಪುರುಷಾರ್ಥ ಸಾಧನೆಗಾಗಿ ನಿನಗೆ ಕೊಟ್ಟಿರುತ್ತೇನೆ.

ಉಗ್ರಸೇನ:—

ಶ್ಲೋ॥ ಕನ್ಯಾಂ ಕನಕ ಸಂಪನ್ನಾಂ ಕನಕಾಭರಣೈರ್ಯುತಾಂ ।
ದಾಸ್ಯಾಮಿವಿಷ್ಣವೇತುಭ್ಯಂ ಬ್ರಹ್ಮಲೋಕ ಜಗೀಷಯಾ ॥

ತಾ॥ ವಸುದೇವನೇ ! ಭಂಗಾರದ ಆಭರಣಗಳಿಂದಲಂಕರಿಸಲ್ಪಟ್ಟ ಈ ಕನ್ಯೆಯನ್ನು, (ನನ್ನ ಬ್ರಹ್ಮಲೋಕ ಪ್ರಾಪ್ತಿಗಾಗಿ) ವಿಷ್ಣು ಸ್ವರೂಪಿಯಾದ ನಿನಗೆ ಕೊಟ್ಟಿರುತ್ತೇನೆ!

(ಎಂದು, ವಸುದೇವನ ಹಸ್ತಾಂಜಲಿಯಲ್ಲಿ ದೇವಕಿಯ ಹಸ್ತವನ್ನಿಡಿಸಿ ತುಲಸೀದಳದೊಂದಿಗೆ ಧಾರೆಯೆರೆವನು.)

ಉಗ್ರಸೇನ:— ಈ ನನ್ನ ಪುತ್ರಿಯನ್ನು ನೀನು ಸುಖವಾಗಿ ಪಾಲಿಸಬೇಕು! ನನ್ನಭೀಷ್ಟದಂತೆ ನಡಿಸಬೇಕಾಗಿ ಕೋರುತ್ತಿರುವೆನು.

ವಸುದೇವ:—ಪೂಜ್ಯರೇ ! ತಮ್ಮ ಮಾತನ್ನು ಮೀರುವುದಿಲ್ಲವು. ತಮ್ಮಾಜ್ಞೆಯನ್ನು ಶಿರಸಾವಹಿಸುತ್ತೇನೆ

ಪುರೋಹಿತರು:—ಎಲೈ ವಸುದೇವನೇ ! ಈ ಮಂಗಳಸೂತ್ರವನ್ನು ದೇವಕಿಯ ಕಂಠಕ್ಕೆ ಅಲಂಕರಿಸು.

(ವಸುದೇವನು ಮಂಗಳಸೂತ್ರವನ್ನು ದೇವಕಿಯ ಕೊರಳಿಗೆ ಕಟ್ಟುವನು.)

ವಸುದೇವ:—"ಮಾಂಗಲ್ಯಂ ತಂತುನಾನೇನ ಮಮಜೀವನ ಹೇತುನಾ । ಕಂಠೇಬದ್ನಾಮಿ ಸುಭಗೇ ಸಾಜೀವಶರದಶ್ಶತಮ್ ॥

ಎಲೌ ಪತಿವ್ರತೆಯಾದ ದೇವಕಿಯೇ ! ನನ್ನ ಜೀವಿತ ಸೌಖ್ಯಕ್ಕೆ ಕಾರಣಭೂತವಾದ ಈ ಮಂಗಳಸೂತ್ರವನ್ನು ನಿನ್ನ ಕೊರಳಿಗೆ ಕಟ್ಟು ವೆನು. ನಾವಿಬ್ಬರೂ ಚಿರಕಾಲ ಸುಖವಾಗಿರೋಣ !

(ದೇವಕಿಯು ವಸುದೇವನ ಕಂಠಕ್ಕೆ ಪುಷ್ಪಹಾರವನ್ನು ಹಾಕುವಳು.)

**ಸುಮಂಗಲಿಯರು:—** ರಾಗ-ಬ್ಯಾಗ್-ಆದಿ.

ವರಸಂತೋಷದಿ ದಂಪತಿಗಳ್ । ನೆರೆಸ ಖದಿಂಬಾಳಲಿ ಚಿರಕಾಲಂ ॥ಪ॥
ಕರುಣಾಕರ ಲಕ್ಷ್ಮೀರಮಣಂ । ಪರಿಪೂರ್ಣ ಕಟಾಕ್ಷದಿ ಪಾಲಿಸಲಿ॥ಅ-ಪ॥
ವಾಣೀಕಮಲಾಸನರಂತೆ । ವರಗೌರೀಶಂಕರರಿರುವಂತೆ । ಮಾಣದೆಸುಖವಾ
ಗಿರಲಿವರು । ಶಿವರಾಮವರದನಾದರದಿಂದಂ ॥ ವರ ॥

(ಎಂದು ಸುಮಂಗಲಿಯರು ಆರತಿ ಎತ್ತುವರು.)

ದೇವಕಿಯು ಹಿರಿಯರಿಗೆಲ್ಲರಿಗೂ ನಮಸ್ಕರಿಸುವಳು.

ಪುರೋಹಿತರು-ದೀರ್ಘ ಸುಮಂಗಲೀಭವ ! ಸುಪುತ್ರವತೀಭವ !

(ನಂತರ ವಸುದೇವನು ವಂದಿಸುವನು.)

ಪುರೋಹಿತರು:— ಆಯುಷ್ಮಾನ್ಭವ ! (ಎಂದಾಶೀರ್ವದಿಸುವರು)

ಉಗ್ರಸೇನ—(ಕಂಸನನ್ನು ನೋಡಿ) ಮಗನೇ ! ನಿನ್ನ ತಂಗಿಯಾದ ಈ ದೇವಕಿಯನ್ನು ಅತ್ತೆಯಮನೆಗೆ ಕಳುಹಿಸಬೇಕಾಗಿರುವುದರಿಂದ ಸಮಸ್ತ ಮರ್ಯಾದೆಗಳೊಂದಿಗೆ ಈ ದಂಪತಿಗಳನ್ನು ರಥದಲ್ಲಿ ಕೂಡಿಸಿ, ನೀನು ಸೈನ್ಯ ಸಮೇತನಾಗಿ ಹೊರಟು ಅವರನ್ನು ಸುಖವಾಗಿ ಅವರ ಪಟ್ಟಣದಲ್ಲಿ ಬಿಟ್ಟು ಬರುವವನಾಗು !

ಕಂಸ:—ಜನಕಾ ! ತಮ್ಮಾಜ್ಞೆಯಂತೆ ನಡೆಯಲು ಸಿದ್ಧನಾಗಿರುವೆನು. ನನ್ನ ಮುದ್ದು ಸೋದರಿಯನ್ನೂ, ಭಾವನನ್ನೂ ರಥದಲ್ಲಿ ಕೂಡಿಸಿ, ನಾನೇ ಸಾರಥ್ಯವನ್ನು ವಹಿಸುವೆನು !

ಉಗ್ರಸೇನ:—ಕುಮಾರಾ ! ನಿನ್ನಿಷ್ಟದಂತೆ ಮಾಡು !

ಕಂಸ:—ಅಪ್ಪಣೆ !

(ಎಲ್ಲರೂ ನಿಷ್ಕ್ರಮಿಸುವರು.)



## ದ್ವಿತೀಯಾಂಕಂ—ದ್ವಿತೀಯರಂಗಂ.

(ಮಥುರಾಪುರ ಸಮೀಪದ ಅರಣ್ಯಮಾರ್ಗದಲ್ಲಿ, ಕಂಸನು ಬಹು ಸಂಭ್ರಮದಿಂದ ದೇವಕೀ ವಸುದೇವರು ಕುಳಿತಿರುವ ರಥವನ್ನು ನಡಿಸುತ್ತ ಸೈನ್ಯ ಸಮೇತನಾಗಿ ತೆರಳುತ್ತಿರುವನು.)

ವಸುದೇವ—ಪ್ರಿಯೇ! ಈ ಅರಣ್ಯಪ್ರಾಂತ್ಯವೆಷ್ಟು ಮನೋಹರವಾಗಿದೆ-ನೋಡಿದೆಯಾ ?

ದೇವಕಿ:—ಪ್ರಾಣಕಾಂತಾ ! ವನ ಭೂಮಿಗಳನ್ನು ನೋಡಿ ಆನಂದಿಸಬೇಕೆಂದಿದ್ದ ನನ್ನ ಸಂಕಲ್ಪವು ಇಂದಿಗೆ ಕೈಗೂಡಿತು ! ಈ ಅರಣ್ಯದ ಸೊಬಗು ನನ್ನ ಮನಸ್ಸಿಗೆ ಬಹಳ ಸಂತೋಷಕರವಾಗಿದೆ !

ಕಂಸ:—ವಿಶಾಲವಾದ ವೃಕ್ಷಗಳಿಂದಲೂ, ಬಗೆಬಗೆಯಾದ ಬಳ್ಳಿಗಳಿಂದಲೂ, ಅನೇಕವಾದ ಮೃಗಪಕ್ಷಿಗಳಿಂದಲೂ, ಕಂಗೊಳಿಸುತ್ತಿರುವ ಈ ಕಾಂತಾರವು ದುರಂತ ಚಿಂತಾಕ್ರಾಂತರಿಗೆ ಕೂಡಾ ಸಂತೋಷವನ್ನುಂಟುಮಾಡತಕ್ಕುದಾಗಿರುವಲ್ಲಿ ಸಹಜ ಸಂತೋಷಿಗಳಾದ ನಮಗೆ ಸಂತೋಷವುಂಟಾಗುವುದರಲ್ಲಿ ಆಶ್ಚರ್ಯವೇನಿದೆ? ಅಷ್ಟದಿಕ್ಪಾಲಕರನ್ನು ಸಹಾ ನನ್ನಾಜ್ಞೆಯಂತೆ ನಡಿಸಬಲ್ಲ ಲೋಕೈಕವೀರನಾದ ನಾನು, ಸೈನ್ಯ ಸಮೇತನಾಗಿ ನಿಮ್ಮೊಂದಿಗಿರುವಲ್ಲಿ ನಿಮಗೆ ಕ್ಷಣಕ್ಷಣಕ್ಕೂ ಸಂತೋಷ ಲಹರಿಯಲ್ಲದೆ ದುಃಖವೆಲ್ಲಿಂದ ಬಂದೀತು ?

(ಎಂದು ಕಂಸನು ತನ್ನ ಪ್ರತಾಪವನ್ನು ಹೇಳುತ್ತಿರುವಲ್ಲಿ ಅಶರೀರ ವಾಣಿಯು ಕೇಳಿಸುವುದು)

**ಅಶರೀರವಾಣಿ:—**

ಕಂ॥ ಧೃಷ್ಟನೆ ಹಿಗ್ಗುವೆಯೇತಕೆ? ತುಷ್ಟನು ನೀನಾಗಿ ಮೆರೆವೆ ಕಡು ಸಂತಸದಿಂ॥
ಶಿಷ್ಟಳಹ ನಿನ್ನ ತಂಗಿಯ । ಅಷ್ಟಮಗರ್ಭಜನು ಸಂಹರಿಪನೈ ನಿನ್ನಂ ॥

ಎಲೈ ಕಂಸನೇ ! ನಿನ್ನ ತಂಗಿಯನ್ನೂ ಭಾವನನ್ನೂ ಮೆಚ್ಚಿಸುವುದಕ್ಕಾಗಿ ಭೂವ್ಯಾಕಾಶಗಳನ್ನರಿಯದೆ ಮೈಮರೆತು ಮಾತನಾಡುತ್ತ ರಥವನ್ನು ನಡಿಸುತ್ತಿರುವೆ ! ಮುಂದೆ ಬರುವ ಕೇಡನ್ನು ತಿಳಿಯದಿರುವೆ

ಸಾಧ್ವೀಶಿರೋಮಣಿಯಾದ ಈ ದೇವಕಿಯು ಎಂಟನೇ ಗರ್ಭದಲ್ಲಿ ಜನಿಸುವ ಬಾಲಕನು ನಿನ್ನನ್ನು ಸಂಹರಿಸುವನೆಂದು ತಿಳಿ!

(ಎಂದು ನುಡಿದ ಅಶರೀರವಾಣಿಯನ್ನು ಕೇಳುತ್ತಲೇ ಕಂಸನು ಸ್ವಲ್ಪಹೊತ್ತು ಭ್ರಾಂತನಾಗಿದ್ದು ತೀವ್ರ ಕೋಪೋದ್ದೀಪಿತನಾಗಿ, ಒರೆಯಿಂದ ಕತ್ತಿಯನ್ನು ಸೆಳೆದು ಝಳಿಪಿಸುತ್ತ ದೇವಕಿಯನ್ನು ಸಂಹರಿಸ ತೊಡಗುವನು.)

ಕಂಸ:—ಆಹಾ! ಎಷ್ಟುಭಯಂಕರವಾದ ವರ್ತಮಾನವನ್ನು ಕೇಳಿದೆನು! ಕ್ಷಣಕಾಲಕ್ಕೆ ಹಿಂದೆ ಯಾರನ್ನು ನಾನು ಪ್ರೀತಿಸುತ್ತಿದ್ದೆನೋ ಅಂತಹ ನನ್ನ ಒಡಹುಟ್ಟಿದವಳೇ ನನ್ನ ಮರಣಕ್ಕೆ ಕಾರಣಭೂತಳಾಗಿರುವಳಲ್ಲಾ! ಈಗ ಮಾಡತಕ್ಕದ್ದೇನು? (ಎಂದು ಕ್ಷಣಮಾತ್ರ ಯೋಚಿಸಿ, ಪುನಃ ಧೈರ್ಯವನ್ನು ತಾಳಿ) ಛೀ! ಛೀ! ದುರ್ಬಲರಾದ ಹೇಡಿಗಳಿಗೆ ಸಹಜವಾದ ಈ ಅಧೈರ್ಯವು ನನಗೇಕೆ ಬಂದಿತು? ದಂಡಧರನಾದ ಯಮನನ್ನು ಕೂಡಾ ತುಂಡುತುಂಡಾಗಿ ಕತ್ತರಿಸತಕ್ಕ ಉದ್ದಂಡ ಪರಾಕ್ರಮಶಾಲಿಯಾದ ನನಗೆ ಯಾವುದು ತಾನೇ ಅಸಾಧ್ಯವು? "ಆತ್ಮಲಾಭಾನ್ನ ಪರಂವಿದ್ಯತೇ!" ಎಂಬಂತೆ ಮೊದಲು ನನ್ನ ಕ್ಷೇಮವನ್ನು ನೋಡಿಕೊಂಡಲ್ಲವೇ ನಂತರ ಮಿಕ್ಕವರ ಕ್ಷೇಮವನ್ನು ನೋಡಬೇಕು! ಇವಳು ನನ್ನ ತಂಗಿಯಾದರೇನು? ಯಾರಾದರೇನು? ನನ್ನ ಮರಣಕ್ಕೆ ಕಾರಣಭೂತಳಾದುದರಿಂದ ನನ್ನ ಪಾಲಿಗೆ ಶತ್ರುವೇಸರಿ! ರೋಗಶೇಷವನ್ನೂ ಶತ್ರುಶೇಷವನ್ನೂ ಇರಿಸಬಾರದೆಂದು ಮಹಾತ್ಮರು ಹೇಳುವರು. ಆದುದರಿಂದ ಇವಳನ್ನು ನನ್ನ ಖಡ್ಗಕ್ಕೆ ಈಗಲೇ ಬಲಿಕೊಡುವೆನು!

(ಎಂದು ಮೇಲಕ್ಕೆಹಾರಿ ದೇವಕಿಯ ಜಡೆಯನ್ನು ಹಿಡಿದು ರಥದಿಂದೀಚೆಗೆ ಸೆಳೆದು ಗರ್ಜಿಸುವನು.)

**ಕಂಸ:—** ರಾಗ–ತೋಡಿ-ಮಿಶ್ರತಾಳ.

ಆಹ! ನೀನೆಯೆನ್ನಪಾಲಿಗೆ ಮೃತ್ಯುವಾದೆಯಾ? ॥ಪ॥
ಬಹುಮಾತೇಕೆ ನಿನ್ನನು ಸಂಹರಿಸುತಲಿ ನಿರ್ಭೀತನಾಗುವೆನು ॥ಆಹ॥ಅ-ಪ॥
ಬಗೆಯುತ ಜನಗಳು ನುಡಿವರು ಪರಿಪರಿ ಹಗಣರಣವೆನ್ನಬಾಳು । ಜಗದೊಳಗನುಜಳ ತನುಜನ ಕರದೊಳು ಮಡಿಯುವನಿವನೆನುತಂ । ಹಗೆಗಳು ನಗುವರು ಮಿಗೆಪರಿಹಾಸದಿ ಬಗೆಬಗೆ ದೂಷಿಸುತಂ ॥ಆಹ॥

ಎಲೌ ದೌರ್ಭಾಗ್ಯಳೇ! ನಿನ್ನ ಅಷ್ಟಮಗರ್ಭದಲ್ಲಿ ಜನಿಸತಕ್ಕ ಶಿಶುವು ನನ್ನನ್ನು ಕೊಲ್ಲುವುದೆಂದುನುಡಿದ ಅಶರೀರವಾಣಿಯನ್ನು ಕೇಳಿದೆಯಲ್ಲವೆ? ನೀನಿಷ್ಟರಲ್ಲವೇ ನಿನ್ನ ಶಿಶುವಿನಿಂದ ನನಗೆ ಭೀತಿಯುಂಟಾಗುವುದು? ಅನರ್ಥಕ್ಕೆ ಕಾರಣಭೂತಳಾದ ನಿನ್ನೊಬ್ಬಳನ್ನುಸಂಹರಿಸಿಬಿಟ್ಟರೆ ನಂತರ ನನಗೆ ಯಾವ ಭಯವೂ ಇರುವುದಿಲ್ಲವು.

(ಎಂದು ಕತ್ತಿಯನ್ನು ಮೇಲಕ್ಕೆತ್ತುವನು.)

ವಸುದೇವ:—(ಕಂಸನ ಕೈಯನ್ನು ಅಡ್ಡಗಟ್ಟಿ ಪ್ರಾರ್ಥಿಸುವನು.)

ಭಾವಾ! ಕಂಸಭೂಪಾಲಾ! ಸೈರಿಸು! ಸೈರಿಸು! ಏನೀ ಅನ್ಯಾಯವು? ಈಗೊಂದು ಮುಹೂರ್ತಕಾಲಕ್ಕೆ ಹಿಂದೆ ನಿನ್ನ ತಂಗಿಯನ್ನು ಬಹು ಸಂಭ್ರಮದಿಂದ ರಥದಲ್ಲಿ ಕೂಡಿಸಿ ಪರಮ ವೈಭವದಿಂದ ಬೀದಿ ಮೆರವಣಿಗೆ ಮಾಡಿಸಿ ಆನಂದಪಡುತ್ತ ಬಂದ ನಿನ್ನ ಸೋದರವಾತ್ಸಲ್ಯವು ಇಷ್ಟುಬೇಗನೆ ಮಾಯವಾಯಿತೇ? ಈಗೇನು ವಿಪತ್ತು ಸಂಭವಿಸಿತು? ಈ ಪ್ರಮಾದಕ್ಕೆ ಕಾರಣವೇನು? ಶಾಂತಚಿತ್ತನಾಗು! ಕಾತುರಪಡಬೇಡ!

ಕಂಸ:—ಎಲೈ ವಸುದೇವನೇ! ಪ್ರಪಂಚದಲ್ಲಿ ಪ್ರತಿಯೊಬ್ಬರೂ ಅವರವರ ಸ್ವಸೌಖ್ಯವನ್ನೇ ಯೋಚಿಸುವರಲ್ಲದೆ ಪರರ ಸೌಖ್ಯವನ್ನು ಯೋಚಿಸಲಾರರು. ಇವಳು ನಿನ್ನ ಭಾರ್ಯೆಯಾದುದರಿಂದ ನಿನಗೆ ಮುದ್ದಾಗಿರಬಹುದು! ಇವಳು ನನ್ನ ಪಾಲಿಗೆ ಗರ್ಭಶತ್ರುವೆಂದು ಯಾವ ಕ್ಷಣದಲ್ಲಿ ಅಶರೀರವಾಣಿಯು ನುಡಿದಳೋ ಆ ಕ್ಷಣದಲ್ಲಿಯೇ ಇವಳ ವಿಷಯದಲ್ಲಿ ನನಗಿದ್ದ ಪ್ರೇಮವು ನಿರ್ಮೂಲವಾಯಿತು! ಇವಳನ್ನು ಸಂಹರಿಸಿದಹೊರತು ನನ್ನ ಮನಸ್ಸಿಗೆ ಸಮಾಧಾನವುಂಟಾಗಲಾರದು! ಈ ದೌರ್ಭಾಗ್ಯಳನ್ನು ಈಗಲೇ ಕೊಲ್ಲುವೆನು!

(ಎಂದು ಖಡ್ಗವನ್ನು ಝಳಿಪಿಸುವನು.)

ವಸುದೇವನು:—(ಕಂಸನನ್ನು ತಡೆದು ಪ್ರಾರ್ಥಿಸುವನು.)

ರಾಗ—ಹಿಂದುಸ್ಥಾನಿ—ಕಾಪಿ—ಅಟತಾಳ.

ಕ್ಷಮಿಸೆನ್ನನು ಭಾವಾ! ಕ್ಷಮಿಸುವೆವು ॥ ಪ ॥ ಅಮವಾ ಈ ಕೋಪವು ತರವಲ್ಲವು ॥ ಅ ॥ ಪ ॥
ಅಶರೀರವಾಣಿಯು ಪುಸಿಮಾತಿಗೇ । ಅಸಹಾಯಶೂರನೇ ಭಯವೇತಕೇ ।
॥ ಕ್ಷಮಿ ॥

ಭಾವಾ! ಕಂಸರಾಜೇಂದ್ರಾ!! ಅಶರೀರವಾಣಿ ನುಡಿಯುವುದೆಂದರೇನು? ಅದರಂತೆ ನಡೆಯುವುದೆಂದರೇನು? ಇಂತಹ ವಿಚಿತ್ರವನ್ನು ಎಂದಾದರೂ ಕೇಳಿರುವೆವೆ? ಪ್ರಾಣಿಕೋಟಿಗಳು ತಮ್ಮತಮ್ಮ ಕರ್ಮಕ್ಕನುಸಾರವಾದ ಶುಭಾಶುಭ ಫಲಗಳನ್ನು ಹೊಂದಬೇಕಾದುದು ಸಹಜವಾಗಿರುವಲ್ಲಿ, ಒಬ್ಬರಿಂದ ಮತ್ತೊಬ್ಬರಿಗೆ ಹಾನಿಯುಂಟಾಗುವುದೆಂಬುದು ನಿಜವಾಗಲಾರದು.

ಶ್ಲೋ॥ ಸುಖಸ್ಯದುಃಖಸ್ಯನಕೋಪಿದಾತಾ। ಪರೋದದಾತೀತಿಕುಬುದ್ಧಿರೇಷಾ।
ಅಹಂಕರೋಮೀತಿ ವೃಥಾಭಿಮಾನಃ। ಸ್ವಕರ್ಮಸೂತ್ರಗ್ರಥಿತೋಹಿ ಲೋಕಃ

ಸುಖದುಃಖಗಳು ಮತ್ತೊಬ್ಬರಿಂದ ತಮಗುಂಟಾಗುವುದೆಂದು ಹೇಳುವವರು ವಿವೇಕಿಗಳಲ್ಲವೆಂತಲೂ, ತಾವು ಇತರರಿಗೆ ಸುಖದುಃಖಗಳನ್ನುಂಟುಮಾಡುತ್ತೇವೆಂದು ಹೇಳುವವರು ದುರಭಿಮಾನಿಗಳೆಂತಲೂ, ಅವರವರು ಮಾಡತಕ್ಕ ಪುಣ್ಯಪಾಪಕರ್ಮಗಳನ್ನನುಸರಿಸಿ ಅವರವರಿಗೆ ಸುಖದುಃಖಗಳುಂಟಾಗುವುವೆಂತಲೂ, ಘಂಟಾಘೋಷವಾಗಿ ಹೇಳಿರುವ ಮಹಾತ್ಮರ ವಚನವನ್ನು ಯೋಚಿಸಿನೋಡು. ಈ ವಾಕ್ಯದ ಅಭಿಪ್ರಾಯವನ್ನು ಗ್ರಹಿಸಿದೆಯಾದರೆ, ತಂಗಿಯಮಕ್ಕಳಿಂದ ಅಣ್ಣನಿಗೆ ವಿಪತ್ತು ಸಂಭವಿಸುವುದೆಂಬ, ಅಶರೀರವಾಣಿಯ ಮಾತು ಸಟೆಯೆಂಬುದು ನಿನಗೇ ಗೋಚರವಾಗುತ್ತದೆ. ಭಾವಾ! ಒಡಹುಟ್ಟಿದ ತಂಗಿಯೆಂದೆಣಿಸದೆ, ಉಭಯ ವಂಶಗಳನ್ನುದ್ಧರಿಸುವ ಹೆಣ್ಣುಮಗಳೆಂದೆಣಿಸದೆ, ಪತಿವ್ರತೆಯಾದ ಸುಮಂಗಲಿಯೆಂದೆಣಿಸದೆ, ಮಹಾಪಾತಕವಾದ ಸ್ತ್ರೀಹತ್ಯೆಯೆಂದಾದರೂ ಎಣಿಸದೆ, ಸಹಜ ಕೋಮಲೆಯಾದ ಅಬಲೆಯನ್ನು ಕೊಲ್ಲುವುದು ನಿನಗೆ ಧರ್ಮವೆ? ಇದು ನಿನ್ನ ಕೀರ್ತಿಗೆ ಭಂಗಕರವಲ್ಲವೆ?

ಕಂಸ:—ಎಲೈ ವಸುದೇವನೇ! ನನ್ನನ್ನು ಯಾರೆಂದು ತಿಳಿದಿರುವೆ? ಒಂದು ಸಾರಿ ಭುಜಾಸ್ಫಾಲನಮಾಡಿ ಸಿಂಹನಾದಮಾಡಿದೆನಾದರೆ ದಂಡಧರನಾದ ಯಮನು ಸಹಾ ಗುಂಡಿಗೆ ಹೊಡೆದು ಸಾಯುವನೆಂದು ತಿಳಿ! ನರಿಯ ಗರ್ಜನೆಗೆ ಸಿಂಹವು ಹೆದರುವುದೇನು? ನಿನ್ನ ಕುಶುಕ್ತಿಗಳಿಂದ ನನ್ನನ್ನು ಹೆದರಿಸುತ್ತಿರುವೆಯೇ? ಅವಕ್ರಪರಾಕ್ರಮ

ಚಕ್ರವರ್ತಿಯಾದ ಕಂಸಭೂಪಾಲನ ಬಳಿಯಲ್ಲಿ ನಿನ್ನ ಮಾಯೋಪಾಯ ಗಳೇನೂ ನಡೆಯಲಾರವೆಂದು ತಿಳಿ!

ದೇವಕಿ:—ಉ॥ ಅಣ್ಣನೇಕೇಳು ನಿನ್ನ ಒಡಹುಟ್ಟಿದ ಸೋದರಿಯಾದಯೆನ್ನೊಳೀ!
ಬಣ್ಣದಿಕೋಪಗೊಂಡು ಸೆರೆಸಂಹರಿಸಲ್ ಪಿಡಿದಿರ್ಪಧರ್ಮವೇ। ನಣ್ಣ
ವಿಚಾರಿಸಣ್ಣ ಧರಣೀಶ್ವರರೊಳ್ ನಿನಗಿರ್ಪಕೀರ್ತಿಯುಂ। ಗಣ್ಯತೆ
ಯುಂ ವಿನಾಶವಹುದಣ್ಣ ಕಟಾಕ್ಷಿಸಿರಕ್ಷಿಸಣ್ಣನೀಂ॥

ಅಣ್ಣಾ! ಒಡಹುಟ್ಟಿದ ತಂಗಿಯಾದವಳಿಗೆ, ಧನಕನಕ ವಸ್ತ್ರ ವಾಹನಾದಿಗಳನ್ನು ಕೊಟ್ಟು ಮನ್ನಣೆಮಾಡಬೇಕಾದುದು ಲೋಕ ಧರ್ಮವಾಗಿರುವಲ್ಲಿ, ಅಂತಹ ಧರ್ಮವನ್ನು ತೊರೆದು ಒಡಹುಟ್ಟಿದವಳ ಕುತ್ತಿಗೆಯನ್ನು ಕತ್ತರಿಸತಕ್ಕವನು ನಿನ್ನ ಹೊರತು ಲೋಕದಲ್ಲಿ ಮತ್ತಾ ರಾವರೂ ಇರುವರೇನಣ್ಣ?

ಕಂಸ:—ನಿಜ! ಒಡಹುಟ್ಟಿದ ತಂಗಿಯನ್ನು ಕೊಲ್ಲತಕ್ಕವನು ಲೋಕದಲ್ಲಿ ನಾನೊಬ್ಬನೇ! ಒಡಹುಟ್ಟಿದವನ ಪಾಲಿಗೆ ಮೃತ್ಯುದೇವತೆ ಗಳಾದ ಮಕ್ಕಳನ್ನು ಹೆರತಕ್ಕವಳೂ ನೀನೊಬ್ಬಳೇ! ಇದೊಂದೇ ನನ್ನ ಆಗ್ರಹಕ್ಕೆ ಮೂಲಕಾರಣವು.

ವಸುದೇವ:—(ತನ್ನಲ್ಲಿ) ಓಹೋ! ಈತನನ್ನು ಸಮಾಧಾನಪ ಡಿಸುವದಕ್ಕೆ ಸ್ವಲ್ಪ ಅವಕಾಶ ವುಂಟಾದಂತಿದೆ. ಹೇಳಿ ನೋಡುವೆನು. ಎಲೈ ಕಂಸ ಭೂಪಾಲನೇ! ಧೀರನೂ, ಶೂರನೂ, ವೀರನೂ ಆದ ನೀನು, ಈ ಸ್ವಲ್ಪ ವಿಷಯಕ್ಕಾಗಿ ಇಷ್ಟು ಚಿಂತಿಸಬೇಕೇ?

ಕಂಸ:—ಇದಕ್ಕಿಂತಲೂ ಹೆಚ್ಚಾದ ವಿಷಯವಾವುದು? ನನ್ನ ಕ್ಷೇಮವನ್ನು ನಾನು ನೋಡಿಕೊಳ್ಳುವುದೇ ಮಹದ್ವಿಚಾರವು.

ವಸುದೇವ:—ಭಾವಾ! ನಿನ್ನ ಕ್ಷೇಮವೇ ನಮ್ಮ ಕ್ಷೇಮವು. ಅಶರೀರವಾಣಿಯು ಹೇಳಿದುದೇನು? ಈಕೆಯ ಗರ್ಭದಲ್ಲಿ ಜನಿಸುವ ಮಕ್ಕಳಿಂದ ನಿನಗೆ ಹಾನಿ ಯುಂಟಾಗುವುದೆಂದು ಹೇಳಿದಳೇ ಹೊರತು ಈಕೆಯಿಂದಲೇ ನಿನಗಪಾಯವುಂಟಾಗುವುದೆಂದು ಹೇಳಲಿಲ್ಲವಷ್ಟೆ!

ಕಂಸ:—ಎಲೈ ಮೂರ್ಖ ಶಿರೋಮಣಿಯೇ! ಈಕೆ ಇದ್ದರಲ್ಲ ವೇ ಈಕೆಗೆ ಮಕ್ಕಳಾಗುವುದೂ, ಅವುಗಳಿಂದ ನನಗೆ ಕೇಡುಂಟಾಗು

ವುದೂ ಮುಂತಾದ ಸಂಕಟಗಳಿಗೂ ಅಸ್ಮತ್ಪರಂಪರೆಗೆ ಕಾರಣಭೂತಳಾದ ಇವಳನ್ನೇ ಕೊಂದುಬಿಟ್ಟರೆ, ನಂತರ ನಾನು ನಿರ್ಭೀತನಾಗಿರಬಹುದಲ್ಲವೆ!

ವಸುದೇವ:—ಹಾಗಲ್ಲ! "ಯತ್ರಾಪರಾಧಃಖಲುತತ್ರದಂಡ" ಎಂಬಂತೆ, ದೋಷವೆಲ್ಲಿರುವುದೋ ಅಲ್ಲಿ ಶಿಕ್ಷೆ ಮಾಡಬೇಕು. ಯಾರಿಂದ ನಿನಗೆ ಹಾನಿ ಯುಂಟಾಗುವುದೆಂದು ಹೆದರುವೆಯೋ ಅಂತಹ ಈಕೆಯ (ಗರ್ಭದಲ್ಲಿ ಜನಿಸುವ) ಶಿಶುಗಳನ್ನೆಲ್ಲಾ ನಿನಗೊಪ್ಪಿಸುತ್ತೇನೆ! ಪುಣ್ಯಾತ್ಮನೇ! ಈಕೆಯನ್ನು ಕೊಲ್ಲಬೇಡ. ನಿನ್ನಡಿಗಳಿಗೆರಗುವೆನು. ಕೈಮುಗಿದು ಬೇಡುವೆನು.

ಕಂಸ:—ನೀನು ಹೇಳುವುದೇನೋ ಸ್ವಲ್ಪ ಯುಕ್ತವಾಗಿಯೇ ಕಾಣುತ್ತದೆ. ಆದಾಗ್ಯೂ, ಹುಟ್ಟುವ ಶಿಶುಗಳನ್ನೆಲ್ಲಾ ನನಗೆ ತಂದೊಪ್ಪಿಸುವಿರೆಂಬುದಕ್ಕೆ ಭರವಸೆ ಯೇನು?

ವಸುದೇವ:— ಮತ್ತಕೋಕಿಲವೃತ್ತಂ.

ಭಾವ! ನಿನ್ನಯ ತಂಗಿ ಈಕೆಯುಪಾರಧರ್ಮಗುಣಾಢ್ಯಳೈ ।
ಭಾವನೀಯ ಚರಿತ್ರೆ ಭೀತಳು ಬಾಲೆನವ್ಯವಿವಾಹಿತೇ ।
ಶ್ರೀವಿಲಾಸಿನಿದೀನಕಂಪಿತಚಿತ್ತಳೀಕೆಯ ರಕ್ಷಿಸೈ ।
ದೇವಕೀಸುತರೆಲ್ಲರಂನಿನಗೀವೆಶೂರಶಿಖಾಮಣೀ ॥

ಈಕೆಯು ಗರ್ಭವನ್ನು ಧರಿಸಿ ಪ್ರಸವಿಸಿದ ಕೂಡಲೇ ಪ್ರತಿಯೊಂದು ಮಗುವನ್ನೂ ತಂದು ನಿನಗೊಪ್ಪಿಸುವೆನು. ನಿನ್ನ ರೌದ್ರವನ್ನು ಬಿಟ್ಟು ಪ್ರಸನ್ನನಾಗು!

ಕಂಸ:—ವಸುದೇವಾ! ಕೇಳಿದುದಕ್ಕೆ ಮಾತ್ರ ಪ್ರತ್ಯುತ್ತರವಿಲ್ಲ. ಮಿಕ್ಕ ವಿಚಾರಗಳನ್ನೆಲ್ಲಾ ಹೇಳುತ್ತಿರುವೆ!

ವಸುದೇವ:—ಹುಟ್ಟುವ ಮಕ್ಕಳನ್ನೆಲ್ಲಾ ನಿನಗೊಪ್ಪಿಸುವೆವಲ್ಲಾ! ಮತ್ತೇನು ಸಂಶಯವು?

ಕಂಸ:—ಮಕ್ಕಳನ್ನೆಲ್ಲಾ ತಂದೊಪ್ಪಿಸುವಿರೆಂಬುದಕ್ಕೆ ಭರವಸೆ ಯೇನು?

ವಸುದೇವ:—ಹಾಗೆ ನಿನಗೆ ಸಂಶಯ ವಿರುವ ಪಕ್ಷಕ್ಕೆ, ಈಕೆಗೆ ಎಂಟುಮಂದಿ ಶಿಶುಗಳಾಗುವ ಪರ್ಯಂತವೂ ನಾವು ನಿನ್ನ ಮನೆಯಲ್ಲಿ ಯೇ ಇರುವೆವು.

ಕಂಸ:—ಒಳ್ಳೆಯದು, ಆಗಲಿ. ನೀವಿಬ್ಬರೂ ನಮ್ಮ ಮನೆಯಲ್ಲಿ ಯೇ ಇರಬೇಕು. ಮತ್ತು ದಿವಸಕ್ಕೊಂದು ಸಾರಿಯಾದರೂ ನನ್ನನ್ನು ಕಾಣಿಸಿಕೊಳ್ಳಬೇಕು.

ವಸುದೇವ:—ನಿನ್ನಿಷ್ಟದಂತಾಗಲಿ.

ಕಂಸ:—ತೆರಳಿರಿ. ಮಧುರೆಗೆ ಹೋಗುವ.

ವಸುದೇವ:—ಅಪ್ಪಣೆ,

(ಮೂವರೂ ಮಧುರೆಗೆ ತೆರಳುವರು.)



## ದ್ವಿತೀಯಾಂಕಂ—ತೃತೀಯ ರಂಗಂ.



ಪ್ರದೇಶ:— ಮಧುರಾಪುರ.

ಕಂಸನ ದರ್ಬಾರ್.

ಕಂಸನು ಸಿಹ್ಮಾಸನದಮೇಲೆ ಕುಳಿತಿರುವನು. ಮಂತ್ರಿ ಸೇನಾ ಪತಿಗಳು ಅವರವರ ಪೀಠಗಳಲ್ಲಿ ಕುಳಿತಿರುವರು. ಅಘಾಸುರ, ಧೇನು ಕಾಸುರ, ವತ್ಸಾಸುರ, ಚಾಣೂರ ಮುಂತಾದವರು ಒಂದೇ ಧ್ವನಿ ಯಿಂದ ಕಂಸನನ್ನು ಹೊಗಳುತ್ತಿರುವರು.

ಸೀ॥ ಶ್ರೀಮದಾಖಂಡಲೋದ್ದಂಡ ಭೂಮಂಡಲಾಧೀಶ ಸಂಪೂರ್ಣಸಾಮ್ರಾಜ್ಯ
ಮಸ್ತು। ದೇಶದೇಶಾಂತರಾಧೀಶಸಂಪೂಜಿತಾಶೇಷಸಮಂಚಿತಸೌಖ್ಯಮಸ್ತು।
ಶೌರ್ಯಸಾಹಸವಿಕ್ರಮೌದಾರ್ಯ ವೈಭವೋಪೇತ ವಿಸ್ತಾರದಿಗ್ವಿಜಯಮಸ್ತು।
ದೇವಗಂಧರ್ವಕಿನ್ನರಯಕ್ಷರಾಕ್ಷಸ ಪ್ರಮುಖಸನ್ನುತನಿತ್ಯಕೀರ್ತಿರಸ್ತು॥

ಗೀ॥ ಪ್ರಣಮಿತಾಶೇಷಲೋಕೈಕಪ್ರಭುವರೇಣ್ಯ। ಶತ್ರುನಿರ್ಮೂಲನಾಧಿಕಶಕ್ತಿಧುರ್ಯ।
ವೀರವೀರಾಧಿವೀರದಾನವಸಮೇತ। ಸ್ವಸ್ತಿತುಭ್ಯಂಸದಾಕಂಸಸಾರ್ವಭೌಮ॥

ಕಂಸ:—ರಾಜತಂತ್ರ ವಿಶಾರದಗಾದ ಮಂತ್ರಿವರ್ಯರೇ ! ಶೂರಶಿಖಾಮಣಿಗಳಾದ ಸೇನಾಪತಿಗಳೇ ! ಅಖಂಡಭೂಮಂಡಲವೆಲ್ಲವೂ ನನ್ನಾಜ್ಞೆಗೊಳಪಟ್ಟಿರುವುದಷ್ಟೆ ! ಭೂಲೋಕದಲ್ಲಿ ನಮಗೆ ಪ್ರತಿಪಕ್ಷಿಗಳಾರೂ ಇಲ್ಲವು. ಇನ್ನು ನಾವು ದೇವಲೋಕವನ್ನು ಸೂರೆಗೈದು, ಆ ಹೇಡಿಯಾದ ದೇವೇಂದ್ರನನ್ನು ಕಾರಾಗೃಹದಲ್ಲಿ ಬಂಧಿಸಬೇಕು. ನನ್ನ ಬಂಧುಮಿತ್ರರಾದ ಜರಾಸಂಧ ಶಿಶುಪಾಲಾದಿಗಳು ನಿದ್ದೆಗಣ್ಣಲ್ಲಿಬೇಕಾದರೂ ನನಗೆ ಸಹಾಯ ಮಾಡುವುದಕ್ಕೆ ಸಿದ್ಧರಾಗಿರುವರು. ಆದುದರಿಂದ ನಾವಿನ್ನು ತಾಮಸಮಾಡದೆ ದಂಡಯಾತ್ರೆಗೆ ಸನ್ನದ್ಧರಾಗಬೇಕು. ಸೈನ್ಯಾಧಿಪತಿಯೇ ! ನಮ್ಮ ಸೈನ್ಯಗಳು ದಿಗ್ವಿಜಯಕ್ಕೆ ಸಿದ್ಧವಾಗಿರುವುವೆ ?

ಸೈನ್ಯಾ:—ರಾಜೇಂದ್ರಾ ! ವಿಜ್ಞಾಪಿಸುವೆನು.

ಕಂ॥ ಅಂಬರಕೆಹಾರಿರವಿಶಶಿ । ಬಿಂಬಗಳಂ ಸೆಳದುತರುವರತಿಸಾಹಸದಿಂ ।
ಕುಂಭಿನಿಯಪೊಕ್ಕುಶೇಷನ । ದಂಬವನಿರ್ಮೂಲಗೈವರೈನಮ್ಮಭಟರ್ ॥

ಬಿರುಗಾಳಿಯು ಸಹಾಯುವನ್ನೊಂದಿದ ದಾವಾಗ್ನಿಯು ವನಾಂತರಗಳನ್ನು ನಿಮಿಷಮಾತ್ರದಲ್ಲಿ ಸುಟ್ಟು ಭಸ್ಮಮಾಡುವಂದದಿ, ಚಂಡಪರಾಕ್ರಮಶಾಲಿಗಳಾದ ನಮ್ಮ ಸೈನಿಕರು, ಕ್ಷಣಮಾತ್ರದಲ್ಲಿ ಗಗನಕ್ಕೆ ಹಾರಿ ಸೂರ್ಯಚಂದ್ರರ ಬಿಂಬಗಳನ್ನು ಬೇಕಾದರೂ ಸೆಳೆತರುವರು. ಸಪ್ತಸಮುದ್ರಗಳ ನೀರನ್ನು ಬೇಕಾದರೂ ನಿಮಿಷಾರ್ಧದಲ್ಲಿ ಹೀರುವರು. ದೇವತೆಗಳನ್ನು ಹಿಡಿದು ಹೂವಿನ ಚೆಂಡುಗಳಂತೆ ಗಗನಮಂಡಲಕ್ಕೆಸೆಯುವರು. ಇದೆಲ್ಲವೂ ಜಗದೇಕವೀರರಾದ ತಮ್ಮ ಮಹಿಮಾವಿಶೇಷವಷ್ಟೆ !

ಕಂಸ:—ಭಾಪು ! ಭಾಪು !! ಶೂರಶಿಖಾಮಣಿಗಳಾದ ನಿಮ್ಮಂತಹ ಪರಿವಾರವು ನನಗಿರುವಲ್ಲಿ, ಸ್ವರ್ಗ ಮರ್ತ್ಯ ಪಾತಾಳಗಳೆಂಬ ತ್ರಿಭುವನಗಳಲ್ಲಿ ಯಾವುದನ್ನು ಬೇಕಾದರೂ ಕ್ಷಣಮಾತ್ರದಲ್ಲಿ ಜಯಿಸಬಲ್ಲೆನು ! ಆದಾಗ್ಯೂ ನಮ್ಮ ಶತ್ರುಗಳಾದ ಇಂದ್ರಾದಿ ದೇವತೆಗಳಮೇಲೆ ದಂಡೆತ್ತಿ ಶೀಘ್ರದಲ್ಲಿಯೇ ಅವರನ್ನು ಜಯಿಸಿ, ಅಮರಾವತಿಯನ್ನು ನಮ್ಮ ಸ್ವಾಧೀನಪಡಿಸಿಕೊಳ್ಳಬೇಕು. ಈವಿಚಾರದಲ್ಲಿ ನಮ್ಮ ಹಿತೈಷಿಗಳಾದ ಜರಾ

ಸಂಧ, ಶಿಶುಪಾಲ, ದಂತವಕ್ತ್ರಾದಿಗಳು ತಮ್ಮ ತಮ್ಮ ಸೈನ್ಯಗಳೊಂದಿಗೆ ನಮಗೆ ಸಹಾಯವಾಗಿ ಬರಲು ಸಿದ್ಧರಾಗಿರುವರು. ನಮ್ಮಿ ಮಂತ್ರಾಲೋಚನೆಯನ್ನು ಕುರಿತು ಅವರೆಲ್ಲರಿಗೂ ಪತ್ರಮೂಲಕ ತಿಳಿಸಿರಿ. ಮಿಕ್ಕ ವಿಷಯಗಳನ್ನು ನಾಳೆಯದಿವಸ ಮಾತನಾಡೋಣ.

ಮಂತ್ರಿ ಸೈನಾಧಿಪತಿಗಳು:—ಪ್ರಭುವೇ! ಚಿತ್ತಾನುಸಾರ ನಡೆಯಲು ಸಿದ್ಧರಾಗಿರುವೆವು.

ಕಂಸ:—ನಾನಿನ್ನು ತೆರಳುವೆನು.

ಎಲ್ಲರೂ:—ಅಪ್ಪಣೆ!

ಕಂಸನು ಅಂತಃಪುರದ ಮಾರ್ಗವಾಗಿ ತೆರಳುವನು. ಮಿಕ್ಕವರು ತಮ್ಮ ತಮ್ಮ ಮನೆಗಳನ್ನು ಕುರಿತು ಹೋಗುವರು.



## ದ್ವಿತೀಯಾಂಕಂ—ಚತುರ್ಥರಂಗಂ.

ಪ್ರದೇಶ:—ಕಂಸನ-ಅಂತಃಪುರದ ಮುಂಭಾಗ.

ಕಂಸ:—ನಾನೆಷ್ಟುಧೈರ್ಯವಾಗಿರೋಣವೆಂದರೂ ಅಶರೀರವಾಣಿಯ ಮಾತುಗಳು ನನ್ನನ್ನು ಕ್ಷಣಕ್ಷಣಕ್ಕೂ ಬಾಧಿಸುತ್ತಿರುವುವು. ದೇವಕಿಯ ಅಷ್ಟಮ ಗರ್ಭಜನಿಂದ, ನಾನು ನಿಜವಾಗಿಯೂ ಸಾಯುವೆನೇ ? [ಎಂದು ಪೇಚಾಡುತ್ತ ಮೆಲ್ಲನೆ ಹೆಜ್ಜೆಯಿಡುತ್ತಿರುವಾಗ, ನಾರದ ಮಹರ್ಷಿಗಳು ವೀಣಾಗಾನ ಮಾಡುತ್ತ ಪ್ರವೇಶಿಸುವರು.]

ನಾರದ:— ರಾಗ—ಆರಭಿ.

ಶ್ರೀಮದಖಿಲಾಂಡಕೋಟಿ ಬ್ರಹ್ಮಾಂಡನಾಯಕಂ, ಸಕಲ ನಿಗಮಾಗಮ ಧರ್ಮಮೂಲಂ, ಸನಕಸನಂದನಾದಿಯೋಗೀಂದ್ರಗೀಯಮಾನಂ, ಸುರಕಿನ್ನರಕಿಂಪುರುಷ ವಿದ್ಯಾಧರ ಗರುಡ ಗಂಧರ್ವನಾಗನಭಶ್ಚರಾದಿಗೀರ್ವಾಣ ಸಂಸ್ತೂಯಮಾನಂ, ನಿಖಿಲ ಜಗದುದಯ ಹೇತುಭೂತಂ, ಅಪಾರಗಭೀರ ಪರಮಾಮೃತ ಕ್ಷೀರಸಾಗರನಿಕೇತನಂ, ಶರಚ್ಚಂದ್ರ ಚಂದ್ರಿಕಾಸುಂದರ ಶೇಷಪರ್ಯಂಕ ವಿಲಾಸಂ, ಅರವಿಂದವಾಸಿನೀವಸುಂಧರಾಸುಂದರೀ ಸಮೇತಂ, ಶಂಖಚಕ್ರಕೌಮೋದಿಕೀನಂದಕಾದಿದಿವ್ಯಾಯುಧಹಸ್ತಂ, ಚತುರ್ಭುಜ ಪ್ರಶಸ್ತಂ, ಅಮೂಲ್ಯ ರತ್ನಾಭರಣಾಲಂಕಾರ ವಿರಾಜಮಾನಂ, ಪೀತಾಂಬರಧರಂ, ರವಿಕೋಟಿ ಭಾಸಮಾನಂ, ಸ್ವಪ

ಕ್ಷ ಪರಪಕ್ಷಾದಿ ಭೇದಭಾವವಿರಹಿತಂ, ದುಷ್ಟಶಿಕ್ಷಣ ಶಿಷ್ಟರಕ್ಷಣಾದಿ ಸರ್ವಸಮಾನ ಧರ್ಮಭಾವಸಹಿತಂ, ವಿಶಾಲನಿಸ್ತುಲ ದಯಾಗುಣೋಪೇತಂ, ಅನಘ-ಅನಂತ-ಅವ್ಯಯ-ಅಪ್ರಮೇಯ-ಅವಿಕಾರ, ಆದಿಮಧ್ಯಾಂತ ರಹಿತ, ಅನುಪಮಾನತೇಜೋಮಯಾಕಾರಂ, ಭವವಿಲಯಾತೀತಂ, ಕರುಣಾಸಮುದ್ರಂ, ಮಹಾನುಭಾವಂ, ಪರಮಪುರುಷಂ, ಸುರನಾಯಕಕಾದ್ಯಷ್ಟದಿಕ್ಪಾಲ ಮಕುಟಮಣಿಗಣ ನೀರಾಜಿತ ಪಾದಾರವಿಂದಂ, ಸದಾನಂದ ಚಂದ್ರಿಕಾ ಮಂದಿರಂ, ಜಗದಾನಂದಕರಂ, ಭಕ್ತತ್ರಾಣಪರಾಯಣಂ, ಲಕ್ಷ್ಮೀರಮಣಂ, ಭಗವಾನ್ ಶ್ರೀಮನ್ನಾರಾಯಣಂ, ಭಜೇಹಂ! ಭಜೇಹಂ!! ಭಜೇಹಂ!!!

[ಇಂತು ನಾರಾಯಣನಾಮ ಸಂಕೀರ್ತನೆ ಮಾಡುತಬಂದ ನಾರದರನ್ನು ಅಂತಃಪುರದ ಮುಂಭಾಗದಲ್ಲಿ ಕಂಸನು ಸಂಧಿಸುವನು.]

ಕಂಸ:—(ತನ್ನಲ್ಲಿ) ಎಲ್ಲಿಯೋ ವೀಣಾಗಾನವಾಗುವಂತೆ ಕೇಳಿಸುತ್ತದೆ. ಇಷ್ಟು ರಮ್ಯವಾಗಿ ವೀಣೆಯನ್ನು ನುಡಿಸುವುದಕ್ಕೆ ಸಾಮಾನ್ಯರಿಗೆ ಸಾಧ್ಯವಲ್ಲ. ಯಾರೋ ಅಸಾಧಾರಣ ಪಂಡಿತರೇ ಹೀಗೆ ನುಡಿಸುತ್ತಿರಬಹುದು. ಒಳ್ಳೆಯದು. ಆಗಲಿ. ಇನ್ನೂ ಸ್ವಲ್ಪ ಮುಂದಕ್ಕೆ ಹೋಗಿ ವಿಚಾರಿಸುವೆನು. [ಎಂದು ಒಂದೆರಡು ಹೆಜ್ಜೆಗಳಿಡುವಷ್ಟರಲ್ಲಿಯೇ ನಾರದರು ಕಾಣಿಸಿಕೊಳ್ಳುರು.]

ಕಂಸ:—ಓಹೋ! ಸರಿ! ಸರಿ! ವೈಣಿಕ ಶಿಖಾಮಣಿಯಾದ ಈತನ ಗಾನವಾದುದರಿಂದಲೇ ಅಷ್ಟು ರಮ್ಯವಾಗಿದ್ದಿತು! ನಾರದರೇ! ನಮಸ್ಕರಿಸುವೆನು.

ನಾರದ:—ಎಲೈ ಅಸಹಾಯ ಶೂರನೇ! ಅಷ್ಟೈಶ್ವರ್ಯ ಸಂಪನ್ನನಾಗು!

ಕಂಸ:—(ಬಹಳ ಸಂತೋಷದಿಂದ ನಗುತ್ತ) ನಾರದರೇ! ವಿಶೇಷ ವರ್ತಮಾನಗಳೇನಾದರೂ ವುಂಟೋ?

ನಾರದ:-ಕಂಸರಾಜೇಂದ್ರಾ! ಈದಿವಸವೇನು ಬಹಳ ಸಂತೋಷವಾಗಿರುವಂತೆ ಕಾಣುತ್ತದೆ?

ಕಂಸ:—ನಾರದರೇ! ತಾವೇಕೆ ಹೀಗೆ ಕೇಳುವಿರಿ?

ನಾರದ:—ಹೇಗೆ ಕೇಳಿದೆನು?

ಕಂಸ:—(ಒಯ್ಯಾರದಿಂದ) "ಈದಿವಸವೇನು ಬಹಳ ಸಂತೋಷವಾಗಿರುವಂತೆ ಕಾಣುತ್ತಿದೆ" ಎಂದು ಕೇಳಿದಿರಲ್ಲಾ.

ನಾರದ:—ಹಾಗೆ ಕೇಳಿದುದು ತಪ್ಪಿತವೆ ?

ಕಂಸ:—ನಾರದರೇ! ನಾನು ಈದಿವಸ ಸಂತೋಷವಾಗಿಯೂ ಮತ್ತೊಂದು ದಿವಸ ವ್ಯಸನವಾಗಿಯೂ ಇರುವುದುಂಟೇನು ? ಹಿಂದೆ ಯೆಂದಾದರೂ ನಾನು ದುಃಖಿಯಾಗಿದ್ದುದನ್ನು ತಾವು ನೋಡಿರುವಿರಾ ಅಥವಾ ಕೇಳಿರುವಿರಾ ? ಸ್ವಲ್ಪ ಯೋಚಿಸಿ ನೋಡಿರಿ!

ನಾರದ:—(ಸ್ವಲ್ಪ ಯೋಚಿಸಿ) ಪ್ರಾಯಶಃ ನೀನು ದುಃಖಪಟ್ಟುದನ್ನು ನಾನು ನೋಡಿದಂತೆ ನನ್ನ ನೆನಪಿನಲ್ಲಿರುವಂತೆ ಕಾಣಲಿಲ್ಲ!

ಕಂಸ:—ನಾರದರೇ ! ಪುನಃ "ನೋಡಿದಂತೆ, ಇರುವಂತೆ" ಎಂದು ಅರ್ಧಾಂಗೀಕಾರದ ಮಾತುಗಳನ್ನೇ ಹೇಳುತ್ತಿರುವಿರಲ್ಲಾ !

ನಾರದ:—ಮತ್ತೇನು ಹೇಳಬೇಕು.

ಕಂಸ:—ಅಂತೆಗಿಂತೆಗಳನ್ನೊಂದುಕಡೆ ಕಟ್ಟಿಡಿ !

ನಾರದ:—ಆಯಿತು !

ಕಂಸ:—ಕಂಸಭೂಪಾಲನು ದುಃಖಿಯಲ್ಲ ! ನಿತ್ಯ ಸುಖಿ ಎಂದು ಘಂಟಾಘೋಷವಾಗಿ ಹೇಳಿರಿ.

ನಾರದ:—ಆಗಬಹುದು ! "ಕಂಸಭೂಪಾಲನು" ಇಂದಿನವರಿವಿಗೂ ದುಃಖಿಯಲ್ಲ ! ಈವರಿವಿಗೂ ನಿತ್ಯವೂ ಸುಖಿಯು !

ಕಂಸ:—(ಸ್ವಲ್ಪ ಕೋಪದಿಂದ) ನಾರದರೇ ! ತಮ್ಮ ಮಾತುಗಳು ಬಹಳ ವ್ಯಂಗ್ಯವಾಗಿ ಕಾಣುತ್ತವೆ !

ನಾರದ:—ಅದು ಹೇಗೆ? ನೀನು ಹೇಳಿಕೊಟ್ಟುದನ್ನು ನಾನು ಹೇಳಿದೆನಷ್ಟೆ !

ಕಂಸ:—ನಾನು ಹೀಗೆ ಹೇಳಿಕೊಡಲಿಲ್ಲ !

ನಾರದ:—ಮತ್ತೆ ಹೇಗೆ ?

ಕಂಸ:—ಕಂಸಭೂಪಾಲನು ದುಃಖಿಯಲ್ಲ ! ನಿತ್ಯಸುಖಿ ! ಎಂದು ನಿಸ್ಸಂಶಯವಾದ ಒಂದೇ ಮಾತಿನಲ್ಲಿ ಹೇಳಿರೆಂದು ನಾನು ಹೇಳಿದೆನಷ್ಟೆ.

ನಾರದ:—ಸರಿಸರಿ! ಹಾಗೆಯೇ ಹೇಳುತ್ತೇನೆ. "ಕಂಸನು ಈವರಿವಿಗೂ ದುಃಖಿಯಲ್ಲ."

ಕಂಸ:—ಅಂದರೆ ಇನ್ನುಮೇಲೆ ದುಃಖಿಯೆಂದರ್ಥವೋ ?

ನಾರದ:—ಅದು ಹೇಗೋ! ನಾನೇನು ಬಲ್ಲೆನು?

ಕಂಸ:—(ಕೋಪದಿಂದ) ನಾರದರೇ! ನನ್ನ ಹೆಸರು ಕೇಳಿದ ಮಾತ್ರಕ್ಕೆ, ಇಂದ್ರಾದಿ ಬೃಂದಾರಕರೆಲ್ಲರೂ ಗಡಗಡನೆ ನಡುಗುವರೆಂಬಲ್ಲಿ ನನಗೆ ದುಃಖವೆಲ್ಲಿಂದಬಂದೀತು? ಒಳ್ಳೆಯದು. ಹಾಗೂ ಆಗಲಿ! ನನಗೆ ದುಃಖ ಉಂಟಾಗುವುದೆಂದೇ ಇಟ್ಟುಕೊಳ್ಳೋಣ! ನನಗೆ ಬರತಕ್ಕ ದುಃಖವು ಎಂತಹದಾಗಿರಬಹುದು? (ಸ್ವಲ್ಪಹೊತ್ತು ಯೋಚಿಸಿ) ಆಗಲಿ! ಈ ಪ್ರಶ್ನೆಯನ್ನು ನಾರದರಿಂದಲೇ ಪರಿಷ್ಕಾರಪಡಿಸುತ್ತೇನೆ! (ಪ್ರಕಾಶವಾಗಿ) ನಾರದರೇ! ದುಃಖವೆಂದರೆ ಎಂತಹದು? ಅದು ಹೇಗಿರುತ್ತದೆ?

ನಾರದ:—ದುಃಖಗಳು ನಾನಾಬಗೆಯಾಗಿರುತ್ತವೆ!

ಕಂಸ:—ಸ್ವಲ್ಪ ವಿವರಿಸಿ ಹೇಳಿರಿ, ಕೇಳೋಣ!

ನಾರದ:—ದುಃಖಗಳಲ್ಲಿ, ಕೆಲವು ಎಂದಿಗೂ ಕೊನೆಗಾಣದ ಮಹಾ ದುಃಖಗಳು; ಕೆಲವು ಕ್ಷಿಪ್ರದಲ್ಲಿಯೇ ಪರಿಹಾರವಾಗತಕ್ಕ ಸಾಮಾನ್ಯ ದುಃಖಗಳು; ಇಂತು ಅನೇಕ ವಿಧವಾಗಿರುತ್ತವೆ

ಕಂಸ:—ದುಃಖವೆಂಬುದು ಒಂದೇ ವಿಧವಾಗಿರಬೇಕು. ಹಾಗಿಲ್ಲದೆ, ಅನೇಕ ವಿಧವಾಗಿರುವುದಕ್ಕೇನು ಕಾರಣವು?

ನಾರದ:—ಲೋಕದಲ್ಲಿ ಮಹಾಮಹಾಶೂರರೂ, ಪ್ರತಾಪಶಾಲಿಗಳೂ, ಸಾಮಾನ್ಯ ಜನರೂ, ಎಂಬದಾಗಿ ಅನೇಕ ವಿಧವಾದ ಜನಗಳಿರುವುದರಿಂದ ದುಃಖಗಳೂ ಅನೇಕ ವಿಧವಾಗಿರುವುವು.

ಕಂಸ:—ಹಾಗಾದರೆ ಯಾವ ಯಾವ ವಿಧವಾದ ದುಃಖಗಳು ಯಾರಾರಿಗುಂಟಾಗುತ್ತವೆ?

ನಾರದ:—ಸಾಮಾನ್ಯ ಜನರಿಗೆ, ಕ್ಷಿಪ್ರವಾಗಿ ಪರಿಹಾರವಾಗತಕ್ಕ ಸಾಮಾನ್ಯ ದುಃಖಗಳುಂಟಾಗುತ್ತವೆ. ತಮಗೆ ಸಮಾನರಲ್ಲವೆಂಬ

ಮಹಾ ಪ್ರತಾಪಶಾಲಿಗಳಿಗೆ, ಎಂದಿಗೂ ಪರಿಹಾರವಾಗದ ಮಹಾ ದುಃಖ ಗಳುಂಟಾಗುತ್ತವೆ.

ಕಂಸ:—ನನಗೆಂಥಾ ದುಃಖವುಂಟಾಗುತ್ತದೆ?

ನಾರದ:—ಛೀ ಛೀ! ನಿನಗೆ ದುಃಖವೇಕೆ ಬರಬೇಕು? ಇಂತಹ ಮಾತುಗಳನ್ನು ನಿನ್ನಂಥವರಾಡಬಾರದು.

ಕಂಸ:—ಹಾಗಲ್ಲ-ನಾರದರೇ! ಸುಮ್ಮನೆ ಪ್ರಸ್ತಾಪವಶದಲ್ಲಿ ಹೇಳಿ ದೆನಷ್ಟೆ! ನಿಜವಲ್ಲದಿದ್ದರೂ ಮಾತಿಗಾಗಿಟ್ಟುಕೊಳ್ಳೋಣ! ಒಂದು ವೇಳೆ ನನಗೆ ಬರಬೇಕಾದರೆ, ಅದು ಎಂತಹ ದುಃಖವಾಗಿರಬಹುದು?

ನಾರದ:—ಕಂಸನೇ! ನಿನಗೆ ತಿಳಿದಮಟ್ಟಿಗೆ ಹೇಳು! ಲೋಕ ಪದ್ಧತಿಯಲ್ಲಿ ಜನರು ಯಾವುದನ್ನು ಘೋರದುಃಖವೆನ್ನುವರು?

ಕಂಸ:—ವಿಯೋಗದುಃಖವನ್ನು!

ನಾರದ:—ಅಂದರೇ?

ಕಂಸ:—ಮರಣ ದುಃಖವನ್ನು!

ನಾರದ:—ಮತ್ತೇನು ನಿನಗೆ ತಿಳಿದೇಯಿರುವುದಲ್ಲಾ!

ಕಂಸ:-(ಗಾಬರಿಯಿಂದ) ಏನೇನು? ನನಗೆ ಮರಣವೆ? (ಎಂದು ಸ್ವಲ್ಪ ಹೊತ್ತು ತಲೆ ಬಾಗಿ ಯೋಚಿಸುತ್ತಿದ್ದು, ಪುನಃ ಧೈರ್ಯವನ್ನು ತಾಳಿ) ಹಾಯ್! ಹಾಯ್! ನಾರದರೆ! ಎಷ್ಟು ನಿರುತ್ಸಾಹಕರವಾದ ಮಾತನ್ನು ಹೇಳಿದಿರಿ? ನಾನೆಂದರೇನು? ಸಾಯುವುದೆಂದರೇನು? ಅಷ್ಟ ದಿಕ್ಪಾಲಕರೆಲ್ಲರನ್ನೂ ಒಂದೇ ಹಿಡಿಯಾಗಿ ಹಿಡಿದು ಗಗನಮಂಡಲಕ್ಕೆ ಹಾ ರಿಸಿ, ನೆಲಕ್ಕೆ ಒಗೆದು ನುಗ್ಗು ನುಗ್ಗು ಮಾಡತಕ್ಕ ವೀರಾಧಿವೀರನಾದ ಕಂಸ ಭೂಪಾಲನೆಂದರೇನು? ಸಾಯುವುದೆಂದರೇನು? ಸಾವು! ಗೀ ವು! ಅದು ಹೇಗಿರುತ್ತದೆ? ನಾರದರೇ! ಸಾವೆಂಬ ಮಾತಿಗೆ ಅರ್ಥವೇನು? ಸಾಯುವುದು ಹೇಗೆ? ಸ್ವಲ್ಪ ಹೇಳಿರಿ-ನೋಡೋಣ!

ನಾರದ:—ಕಂಸಾ! ಸಾವು ನಾನಾಬಗೆಯಾಗಿರುತ್ತದೆ!

ಕಂಸ:—ಏನೇನು ಬಗೆ? ಈಗ ಲೋಕದಲ್ಲನೇಕರು ಸಾಯು ವರಲ್ಲಾ! ಒಬ್ಬೊಬ್ಬರೊಂದೊಂದು ವಿಧವಾಗಿ ಸಾಯುವರೋ?

ನಾರದ:—ನಿಜ! ಕೆಲವರು ಸ್ವಕಾರ್ಯಕ್ಕಾಗಿ ಸಾಯುವರು; ಕೆಲವರು ಪರಕಾರ್ಯಕ್ಕಾಗಿ ಸಾಯುವರು; ಕೆಲವರು ಸ್ವಕಾರ್ಯ ಪರಕಾರ್ಯಗಳೆರಡಕ್ಕಾಗಿಯೂ ಸಾಯುವರು. ಕೆಲವರು ಸಾವಿಗಾಗಿ ಎದುರು ನೋಡುತ್ತಿದ್ದು ಸಾಯುವರು. ಕೆಲವರು ಸಾವನ್ನು ಬರಮಾಡಿಕೊಂಡು ಸಾಯುವರು; ಕೆಲವರು ತಾನಾಗಿಯೇ ಬರುವ ಸಾವಿಗಾಗಿ ಸಾಯುವರು; ಕೆಲವರು ಸಾವು ಬರುವಂತೆ ಮಾಡಿಕೊಂಡು ಸಾಯುವರು; ಕೆಲವರು ದ್ವೇಷಕ್ಕಾಗಿ ಸಾಯುವರು; ಕೆಲವರು ಶೌರ್ಯಕ್ಕಾಗಿ ಸಾಯುವರು; ಕೆಲವರು ಕ್ರೋಧಕ್ಕಾಗಿ ಸಾಯುವರು; ಕೆಲವರು ಮೋಹಕ್ಕಾಗಿ ಸಾಯುವರು; ಕೆಲವರು ತಿಂದಿರಲಾರದೆ ಸಾಯುವರು; ಕೆಲವರು ಬದುಕಲಾರದೆ ಸಾಯುವರು; ಕೆಲವರು ಈರ್ಷ್ಯೆಗಾಗಿ ಸಾಯುವರು; ಪರಂತು ಕೆಲವರು ಹೊನ್ನಿಗಾಗಿಯೂ, ಕೆಲವರು ಹೆಣ್ಣಿಗಾಗಿಯೂ, ಕೆಲವರು ಮಣ್ಣಿಗಾಗಿಯೂ ಸಾಯುವರು; ಇದೀಗ ಮೃತ್ಯುಪುರಾಣದಲ್ಲಿ ಮರಣ ವಿಧಾನ ಪ್ರಕರಣವು!

ಕಂಸ:—ಹಾಗಾದರೇ ನಾನು ಹೇಗೆ ಸಾಯುವೆನು?

ನಾರದ:—ಅದು ಪರಿಷ್ಕಾರವಾಗಿಯೇ ತೀರ್ಮಾನವಾಗಿರುವುದಲ್ಲಾ!

ಕಂಸ:—(ಕಳವಳದಿಂದ) ಹೇಗೆ ಸಾಯುವೆನೆಂದು ತೀರ್ಮಾನವಾಗಿರುವುದು?

ನಾರದ:—ನಿನ್ನ ತಂಗಿಯಾದ ದೇವಕಿಯು ಅಷ್ಟಮಗರ್ಭದಲ್ಲಿ ಹುಟ್ಟುವ ಶಿಶುವಿನಿಂದ ಸಾಯುವೆಯೆಂದು!

ಕಂಸ:—(ಮತ್ತಷ್ಟು ಕಳವಳದಿಂದ) ಹಾಗೆಂದು ತೀರ್ಮಾನ ಮಾಡಿದವರು ಯಾರು?

ನಾರದ:—ಅಶರೀರವಾಣಿಯು!

ಕಂಸ:—(ದೀನನಾಗಿ) ನಾರದರೇ! ಅದನ್ನು ತಾವೆಲ್ಲಿ ಕೇಳಿದಿರಿ?

ನಾರದ:—ಈಪ್ರಾಂತ್ಯದಲ್ಲಿಯೇ ಕೇಳಿದೆನು?

ಕಂಸ:—(ಆಶ್ಚರ್ಯದಿಂದ) ಈಪ್ರಾಂತ್ಯವೆಂದರೇ ಎಲ್ಲಿ?

ನಾರದ:—ಇಲ್ಲಿಯೆ?

ಕಂಸ:—(ಗಾಬರಿಯಿಂದ) ಇಲ್ಲಿಯೇ ಕೇಳಿದಿರಾ? ಯಾರ ಬಾಯಿಂದ ಕೇಳಿದಿರಿ?

ನಾರದ:—ಕಂಸನ ಬಾಯಿಂದ!

ಕಂಸ:—(ಭಯದಿಂದ)ಏನೇನು? ನನ್ನ ಬಾಯಿಂದಲೇ ಕೇಳಿದಿರಾ?

ನಾರದ:—(ನಸುನಗುತ) ಎಲೈ ಕಂಸನೇ! ಏಕೆ ಮರೆಮಾಚುತ್ತಿರುವೆ? ನೀನು ಹೇಳದಿದ್ದರೆ ನನಗೆ ತಿಳಿಯಲಾರದೆಂದೆಣಿಸಿದೆಯಾ? ಈವಿಚಾರವನ್ನೆಲ್ಲಾ ನಾನು ಚೆನ್ನಾಗಿ ಬಲ್ಲೆನು!

ಕಂಸ:—ನಾರದರೇ! ಈವಿಚಾರವನ್ನೆಲ್ಲಾ ತಾವು ಬಲ್ಲಿರಾ?

ನಾರದ:—ಈವಿಚಾರವನ್ನೂ ಬಲ್ಲೆನು! ಇದಕ್ಕೆ ಮೂಲಕಾರಣವಾದ ರಹಸ್ಯ ವಿಚಾರವನ್ನೂ ಬಲ್ಲೆನು!

ಕಂಸ:—(ಭಯವಿನಯಗಳಿಂದ ನಾರದರಿಗೆ ವಂದಿಸಿ ಪ್ರಾರ್ಥಿಸುವನು.)

ಕಂ॥ ನಾರದಮುನಿವರಶತ್ರುವಿ, ಚಾರವದೇನೇನುಪೇಳಿನಿರ್ವಂಚನೆಯಿಂ ।
ಕೂಳರನೆಲ್ಲರಪಿಡಿಯುತೆ, ಸೀಳುವೆನೀಕ್ಷಣದೊಳೆನ್ನಭುಜಬಲದಿಂದಂ ॥

ನಾರದರೆ! ನನ್ನ ವಿಚಾರವಾಗಿ ದುರಾಲೋಚನೆ ಮಾಡತಕ್ಕವರು ಕೂಡಾ ಇರುವರೇನು? ಅಂಥವರಾರು? ದಯವಿಟ್ಟು ಅವರ ವಿಚಾರವನ್ನು ತಿಳಿಸಿರಿ! ಅಂತಹ ನೀಚರನ್ನು ಈಗಲೇ ಪಿಡಿದು ನನ್ನ ಕತ್ತಿಗೆ ಬಲಿಕೊಡುವೆನು!

ನಾರದ:—ಕಂಸಾ! ಸ್ವಲ್ಪ ಸೈರಿಸು. ಏತಕ್ಕೆ ವೃಥಾ ಕಂಠಶೋಷ ಮಾಡಿಕೊಳ್ಳುವೆ? ಕಾರ್ಯಕಾರಣಗಳ ರಹಸ್ಯವನ್ನರಿಯದೆ ವ್ಯರ್ಥವಾಗಿ ಮಾತನಾಡುವುದರಿಂದೇನು ಪ್ರಯೋಜನ?

ಕಂಸ:—ನಾರದರೇ! ಆ ರಹಸ್ಯವನ್ನು ತಿಳಿಸಿರಿ.

ನಾರದ:—ಕಂಸನೇ! ಪೇಳುವೆನು ಕೇಳು. ಪರಿಹಾಸ್ಯವಾಗಿ ಭಾವಿಸಬೇಡ! ನಿನ್ನ ತಂಗಿಯಾದ ದೇವಕಿಯೂ, ನಿನ್ನ ಭಾವನಾದ ವಸುದೇವನೂ, ಗೋಕುಲದಲ್ಲಿರುವ ನಂದಗೋಪನೂ, ಯಶೋದೆಯೂ, ಗೋಪಾಲಕರೂ, ಗೋಪಕಾಮಿನಿಯರೂ, ಮತ್ತು ಸಮಸ್ತ ಯಾದವರೂ ಸಾಮಾನ್ಯ ಮನುಷ್ಯರಲ್ಲ. ಅವರೆಲ್ಲರೂ ದೇವತೆಗಳೆಂದು ತಿಳಿ!

ನಿನ್ನನ್ನೂ, ಜರಾಸಂಧ, ಶಿಶುಪಾಲ, ದಂತವಕ್ರಾದಿಗಳನ್ನೂ ಸಂಹರಿಸುವುದಕ್ಕಾಗಿ ಶ್ರೀಮನ್ನಾರಾಯಣನು ನಿನ್ನ ತಂಗಿಯಾದ ದೇವಕಿಗೆ ಪುತ್ರನಾಗಿ ಅವತರಿಸುವನು. ರಾಕ್ಷಸ ನಾಶನಾರ್ಥವಾಗಿ ದೇವತೆಗಳೆಲ್ಲರೂ ಅಂಶರೂಪವಾಗಿ ಅವತರಿಸುವರೆಂದು ತಿಳಿ. ನಿಮ್ಮ ತಂದೆಯಾದ ಉಗ್ರಸೇನನು ಸಹ ದೇವತೆಗಳ ಪಕ್ಷದವನು. ಬಹಳ ಹೊತ್ತು ಮಾತನಾಡುವುದಕ್ಕೆ ನನಗೆ ಸಾವಕಾಶವಿಲ್ಲವು. ನಾನಿನ್ನು ತೆರಳುವೆನು. ಎಚ್ಚರಿಕೆ! [ಎಂದು ಹೇಳುತ್ತಾ ನಾರದರು ತೆರಳುವರು.]

ಕಂಸ:—(ತನ್ನಲ್ಲಿ) ಆಹಾ! ದೇವತೆಗಳೆಷ್ಟು ರಹಸ್ಯವಾಗಿ ಕಾರ್ಯಗಳನ್ನು ನಡಿಸುತ್ತಿರುವರು. ಈ ಯಾದವರೆಲ್ಲರೂ ದೇವತೆಗಳೆಂತಲೂ, ದಾನವ ವೈರಿಯಾದ ವಿಷ್ಣುವು ನನ್ನ ತಂಗಿಯ ಗರ್ಭದಲ್ಲಿ ಅವತರಿಸುವನೆಂತಲೂ ನಾರದರು ಹೇಳಿದ ಮಾತು ಸತ್ಯವು. ಲೇಶವಾದರೂ ಸಂಶಯವಿಲ್ಲ. ಆದಿವಸ ಅಶರೀರವಾಣಿಯೂ ಇದೇ ಮಾತನ್ನೇ ಸೂಚಿಸಿತು. ಈಗಿನ ಸಂದರ್ಭದಲ್ಲಿ ಎಲ್ಲರೂ ನನಗೆ ಶತ್ರುಗಳಾಗಿಯೇ ಇರುವರು. ನನ್ನ ತಂದೆಯೇ ನನಗೆ ಪ್ರತಿಪಕ್ಷಿಯಾಗಿರುವನು. (ಸ್ವಲ್ಪಹೊತ್ತು ತಲೆಬಾಗಿ ಯೋಚಿಸಿ) ಆದರೇನಾಯಿತು? ಸರ್ವಾನರ್ಥಗಳಿಗೂ ಮೂಲಕಾರಣರಾದ ದೇವಕೀ ವಸುದೇವರನ್ನೂ, ನನ್ನ ತಂದೆಯಾದ ಉಗ್ರಸೇನನನ್ನೂ ಈಗಲೇ ಪಿಡಿದು ಕಾರಾಗೃಹದಲ್ಲಿ ಬಂಧಿಸುವೆನು. ಎಂಟನೇ ಗರ್ಭದಿಂದಲ್ಲವೇ ನನಗೆ ಹಾನಿಯುಂಟಾಗುವುದೆಂಬ ಅಲಕ್ಷ್ಯಭಾವದಿಂದ ನಾನಿನ್ನು ಸುಮ್ಮನಿರಕೂಡದು. ಬಹಳ ಜಾಗ್ರತೆಯಿಂದಿರಬೇಕು. ಯಾವ ಕ್ಷಣದಲ್ಲಿ ಏನು ವಿಪತ್ತು ಸಂಭವಿಸುವುದೋ? ಈ ಸಂದರ್ಭದಲ್ಲಿ ನನ್ನ ಮಿತ್ರರಾದ ಅಘಾಸುರ, ಧೇನುಕಾಸುರ, ಪ್ರಲಂಬಾಸುರ, ವತ್ಸಾಸುರ, ಬಕಾಸುರ, ತೃಣಾವರ್ತ, ಶಕಟ, ಚಾಣೂರ, ಮುಷ್ಟಿಕ, ಜರಾಸಂಧ, ಶಿಶುಪಾಲ, ದಂತವಕ್ರಾದಿಗಳೆಲ್ಲರಿಗೂ ಈವಿಚಾರವನ್ನು ತಿಳಿಸುವುದು ಶ್ರೇಯಸ್ಕರವು. ಈಕ್ಷಣವಲ್ಲಿಯೇ ಉಗ್ರಸೇನ-ದೇವಕೀವಸುದೇವರನ್ನು ಸೆರೆಯಲ್ಲಿ ಬಂಧಿಸಿ, ನನಗೆ ಪರಮಾಪ್ತರಾದವರನ್ನಲ್ಲಿ ಕಾವಲಿಟ್ಟು, ನನ್ನ ಕಾರ್ಯದಲ್ಲಿ ನಾನು ಜಾಗರೂಕನಾಗಿರುವೆನು! [ಎಂದು ಕಂಸನು ಅಂತಃಪುರಕ್ಕೆ ತೆರಳುವನು.]

# ದ್ವಿತೀಯಾಂಕಂ—ಪಂಚಮರಂಗಂ.

## ಪ್ರದೇಶ:—ಶ್ರೀವೈಕುಂಠ.





[ಶ್ರೀಮಹಾ ವಿಷ್ಣುವು, ಯೋಗಮಾಯೆಗೆ ಕಾರ್ಯಕ್ರಮಗಳನ್ನು ಆಜ್ಞಾಪಿಸುವನು.]



ವಿಷ್ಣು:—ಎಲೌ ಪರಾಶಕ್ತಿಯೇ! ಕಂಸಾದಿ ದುಷ್ಟ ರಾಕ್ಷಸರನ್ನು ಸಂಹರಿಸಿ, ಭೂಭಾರವನ್ನು ಪರಿಹರಿಸಬೇಕಾದ ಮಹತ್ಕಾರ್ಯವು ನಡೆಯಬೇಕಾಗಿದೆ. ಈ ಸಂದರ್ಭದಲ್ಲಿ ನೀನು ಮಾಡಬೇಕಾದ ಕಾರ್ಯಗಳು ಕೆಲವಿರುವುವು!

ಯೋಗಮಾಯೆ:—ಉ॥ ಆರ್ಯಧರ್ಮಮುರರಿ ಕುಜನಾವಳಿಶಿಕ್ಷಣದಕ್ಷ ಧರ್ಮಸಂ
ರಕ್ಷಸುಭಿ ದಾಯಕಸುಲಕ್ಷಣಲಕ್ಷಿತಸತ್ವಚರಿತ್ರಾ। ಸುಕ್ಷ
ಣವಿಶ್ವವಿಶ್ವ ಮಯಸೂರಿಜನೋದ್ಧರ ಸತ್ಕೃಟಾಪಾ। ಪ
ಕ್ಷಯದಕ್ಷ ದೇವಬುಧಪಕ್ಷಸುರ ಕಭಕ್ತಪಾಲಕಾ॥

ಪರಂಧಾಮನೇ! ಅಧರ್ಮವನ್ನು ನಿರ್ಮೂಲ ಮಾಡುವುದಕ್ಕೂ, ಧರ್ಮವನ್ನುದ್ಧರಿಸುವುದಕ್ಕೂ ಕರ್ತನಾದ ನೀನು ಸಂಕಲ್ಪಿಸಿದೆಯಾದರೆ,

ಅಣುವುಗಳು ಬ್ರಹ್ಮಾಂಡಗಳಾಗಿಯೂ, ಬ್ರಹ್ಮಾಂಡಗಳು ತೃಣಗಳಾಗಿಯೂ ಕ್ಷಣಮಾತ್ರದಲ್ಲಿ ಪರಿಣಮಿಸುತ್ತವೆ. ಪುರುಷೋತ್ತಮಾ! ಈ ಸಂದರ್ಭದಲ್ಲಿ ನಾನು ಮಾಡಬೇಕಾದ ಕಾರ್ಯವೇನೆಂಬುದನ್ನು ಅಜ್ಞಾಪಿಸು-ಶಿರಸಾವಹಿಸಿ ಮಾಡುವೆನು.

ವಿಷ್ಣು:—ನಿತ್ಯಮಂಗಳ ಸ್ವರೂಪಿಣಿಯಾದ ಪರಾಶಕ್ತಿಯೇ! ಸರ್ವಜ್ಞತ್ವಾದಿ ಕಲ್ಯಾಣ ಗುಣೋಪೇತಳೂ, ಸದಾನಂದ ತುಂದಿಲಳೂ ಆದ ನಿನ್ನಿಂದಲೇ ಸಮಸ್ತ ಕಾರ್ಯಗಳೂ ನಡೆಯಬೇಕಾಗಿರುವುವು. ವಸುದೇವನ ಭಾರ್ಯೆಯರಲ್ಲಿ ರೋಹಿಣಿ ಎಂಬ ಒಬ್ಬಾಕೆಯು ಹೊರತು ಮಿಕ್ಕವರೆಲ್ಲರೂ ಕಂಸನಿಂದ ಬಂಧಿಸಲ್ಪಟ್ಟಿರುವರು. ರೋಹಿಣಿಯೊಬ್ಬಳು ಮಾತ್ರ ಕಂಸನ ಬಂಧನಕ್ಕೆ ಸಿಲುಕದೆ ತಪ್ಪಿಸಿಕೊಂಡು ಹೋಗಿ ನಂದಗೋಕುಲದಲ್ಲಿ ಸೇರಿರುವಳು. ದೇವಕಿಯು ಈಗ ಏಳನೇ ಗರ್ಭವನ್ನು ಧರಿಸಿ ಕಾರಾಗೃಹದಲ್ಲಿ ಪರಿತಪಿಸುತ್ತಿರುವಳು. ನೀನು ಈಗಲೇ ಮಧುರಾಪುರಕ್ಕೆ ಹೋಗಿ ದೇವಕಿಯ ಗರ್ಭದಲ್ಲಿರುವ ಶೇಷಾಂಶವಾದ ತೇಜಸ್ಸನ್ನು ಸಂಗ್ರಹಿಸಿ ನಂದಗೋಕುಲದಲ್ಲಿರುವ ರೋಹಿಣೀದೇವಿಯ ಗರ್ಭದಲ್ಲಿಡು. ದೇವಕೀ ವಸುದೇವರಿಗೆ ಹಿಂದಿನ ಜನ್ಮದಲ್ಲಿ ನಾನು ಕೊಟ್ಟಿದ್ದ ವರವನ್ನು ಪರಿಪಾಲಿಸುವುದಕ್ಕಾಗಿ ನಾನು ಅವರಿಗೆ ಪುತ್ರನಾಗಿ ಅವತರಿಸುವೆನು. ನೀನು ನಂದಗೋಪನ ಸುಂದರಿಯಾದ ಯಶೋದಾ ದೇವಿಗೆ ಪುತ್ರಿಯಾಗಿ ಅವತರಿಸು. ನಂತರ ಕಾಲೋಚಿತವಾದ ಕಾರ್ಯಕರಣಗಳನ್ನು ನಡಿಸುತ್ತ, ದನುಜರನ್ನು ಸಂಹರಿಸೋಣ!

ಯೋಗಮಾಯೆ:—ಭಗವಂತನೇ! ನಿನ್ನಾಜ್ಞೆಯಂತೆ ನಡೆಯಲು ಸಿದ್ಧಳಾಗಿರುವೆನು.

ವಿಷ್ಣು:—ಎಲೌ ಪರಾಶಕ್ತಿಯೇ! ಈಕಾರ್ಯವು ಲೋಕಸಂರಕ್ಷಣಾರ್ಥವಾದುದು. ಇದರಿಂದ ನಿನ್ನ ಕೀರ್ತಿಯು ಜಗದ್ವ್ಯಾಪಕವಾಗುವುದು. ಜನರು ನಿನ್ನನ್ನು, ಕಾಂಚೀಪುರದಲ್ಲಿ ಕಾಮಾಕ್ಷಿಯೆಂತಲೂ ಮಧುರಾಪುರದಲ್ಲಿ ಮೀನಾಕ್ಷಿಯೆಂತಲೂ, ಕಾಶಿಯಲ್ಲಿ ವಿಶಾಲಾಕ್ಷಿಯೆಂತಲೂ, ಭದ್ರೇಶ್ವರದಲ್ಲಿ ಭದ್ರಕಾಳಿಯೆಂತಲೂ. ವರಾಹಗಿರಿಯಲ್ಲಿ ವಿಜಯೆಯೆಂತಲೂ, ಮಾತೃಕಾಕ್ಷೇತ್ರದಲ್ಲಿ ವೈಷ್ಣವಿಯೆಂತಲೂ, ಮಾನಸ

ಕ್ಷೇತ್ರದಲ್ಲಿ ಕುಮುದೆಯೆಂತಲೂ, ಅಮರಕಕ್ಷೇತ್ರದಲ್ಲಿ ಚಂಡಿಕೆಯೆಂತಲೂ, ಹಸ್ತಿನಾವತಿಯಲ್ಲಿ ಕೃಷ್ಣೆಯೆಂತಲೂ, ಶ್ರೀಶೈಲದಲ್ಲಿ ಮಾಧವಿಯೆಂತಲೂ, ಕನ್ಯಾಕುಬ್ಜದಲ್ಲಿ ಕನ್ಯಕೆಯೆಂತಲೂ, ಮಾಯಾವತಿಯಲ್ಲಿ ಮಹಾಮಾಯೆಯೆಂತಲೂ, ಸುಪಾರ್ಶ್ವಕ್ಷೇತ್ರದಲ್ಲಿ ನಾರಾಯಣಿಯೆಂತಲೂ, ರುದ್ರಕೋಟಿಯಲ್ಲಿ ಈಶಾನೆಯೆಂತಲೂ, ಬ್ರಹ್ಮಕ್ಷೇತ್ರದಲ್ಲಿ ಶಾರದೆಯೆಂತಲೂ, ಸಿದ್ಧವನದಲ್ಲಿ ಅಂಬಿಕೆಯೆಂತಲೂ, ಸರ್ವತ್ರ ದುರ್ಗೆಯೆಂತಲೂ, ನಿನ್ನ ನಾಮರೂಪಗಳನ್ನು ಹೊಗಳುತ್ತ ಪೂಜಿಸುವರು!

ಯೋಗಮಾಯೆ:—ಪರಮಾತ್ಮನೇ! ನಿನ್ನಿಷ್ಟದಂತಾಗಲಿ! ನಾನಿನ್ನು ತೆರಳುವೆನು!

ವಿಷ್ಣು:—ಕಲ್ಯಾಣಿ! ನಿನಗೆ ಮಂಗಳವಾಗಲಿ!

[ನಿಷ್ಕ್ರಮಿಸುವಳು.]



ಪ್ರದೇಶ—ಮಧುರಾಪುರದ ಸೆರೆಮನೆ.

ದೇವಕಿ:— ರಾಗ ಖರಹರಪ್ರಿಯ ಅಥವಾ ಹಿಂದೂಸ್ಥಾನಿಕಾಪಿ-ಏಕತಾಳ.

ಹಾ ವಿಧೀಸೈಸಲೆಂತುಘೋರದುಃಖವ ॥ ಪ ॥
ದುರಾತ್ಮನಾದ ಕಂಸನಿಂತುಕಾಡಿಸುತಿರುವ ॥ ಹಾ ವಿಧೀ ॥ ಅ-ಪ ॥
ನೆರೆಪೆತ್ತ ಜನನಿ ಜನಕರನ್ನುಕರಕರೆಪಡಿಪ, ದುರಿತಾತ್ಮ
ನವನು ದೈವದ್ರೋಹಿ ನೀಚನಾಹಹಾ ॥ ಹಾವಿಧೀ ॥

ಸರ್ವಶಕ್ತನಾದ ಭಗವಂತನೆ! ನಮಗೆ ಬಂಧುಮಿತ್ರರೆನಿಸುವ ಜನರು ಅನೇಕರಿದ್ದಾಗ್ಯೂ, ನಮ್ಮ ಕಷ್ಟಸುಖಗಳನ್ನು ವಿಚಾರಿಸತಕ್ಕವನು ಒಬ್ಬರಾದರೂ ಇಲ್ಲವು. ಕಂಸನ ದುರಾಗ್ರಹಕ್ಕೆ ಎಲ್ಲರೂ ಹೆದರುತ್ತಿರುವರು. ಹಸಂತು ನನ್ನ ಜನನೀಜನಕರ ಮುಖವನ್ನಾದರೂ ನೋಡೋಣವೆಂದರೆ ಅದೂ ಸಾಧ್ಯವಿಲ್ಲವಾಗಿದೆ! ದೌರ್ಭಾಗ್ಯಳಾದ ನನಗಾಗಿ ಆರ್ಯಪುತ್ರನೂ ಕಷ್ಟಕ್ಕೆ ಗುರಿಯಾಗಿರುವನು. ಎಷ್ಟು ಚಿಂತಿಸಿ ಫಲವೇನು? ಎಲೈ ದೀನಬಂಧುವೇ! ನಮಗೆ ತಂದೆಯೂ ನೀನೆ! ತಾಯಿಯೂ ನೀನೆ. ಬಂಧುವೂ ನೀನೆ. ಗುರುವೂ ನೀನೆ. ದೈವವೂ ನೀನೆ. ಗತಿಯೂ ನೀನೆ. ಸರ್ವವೂ ನೀನೆ. ನಿನ್ನ ವಿಲಾಸವಿದ್ದಂತಾಗಲಿ!

[ದೇವಕಿಯು ಪರಿತಾಪವನ್ನು ಕೇಳುತ ಹೊರಗೆ ನಿಂತಿದ್ದ ಉಗ್ರ ಸೇನನ ಪತ್ನಿಯಾದ ಮಹಾರಾಣಿಯು ಒಳಹೊಕ್ಕು ಮಗಳನ್ನು ಸಮಾಧಾನಪಡಿಸುವಳು.]

ಮಹಾರಾಣಿ:—ಮಗಳೇ! ಭಗವಂತನು ನಿನಗೆ ಮಂಗಳವನ್ನುಂಟುಮಾಡಲಿ!

ದೇವಕಿ:—(ತಾಯಿಗೆ ನಮಸ್ಕರಿಸಿ) ಅಮ್ಮಾ! ನೀವೆಲ್ಲರೂ ಕುಶಲದಿಂದಿರುವಿರಾ?

ಮಹಾರಾಣಿ:—ದೇವಕೀ! ನಮ್ಮ ಕುಶಲವು ಹಾಗಿರಲಿ. ಸದ್ಯಕ್ಕೆ ನಿನ್ನ ಸಂಕಟವನ್ನು ನೋಡಿ ಸೈರಿಸಲಾರದೆ ನನ್ನ ಹೃದಯವು ಬಿರಿದುಹೋಗುತ್ತಿದೆ. ನಾನೇನು ಮಾಡಬಲ್ಲೆನು? ದುಷ್ಟಪುತ್ರನನ್ನು ಪಡೆದ ಹತಭಾಗ್ಯಳಾದ ನಾನು ಈ ಕ್ರೂರಕರ್ಮಗಳನ್ನೆಲ್ಲಾ ಕಣ್ಣಿಂದ ನೋಡಬೇಕಾಯಿತು. ನಮ್ಮನ್ನು ಕಾಪಾಡತಕ್ಕವರಾರು?

ದೇವಕಿ:—ಅಮ್ಮಾ ನಮ್ಮ ಕಷ್ಟವನ್ನು ಪರಿಹರಿಸತಕ್ಕ ಶಕ್ತರು ಮನುಷ್ಯರಲ್ಲಿ ಯಾರೂ ಇಲ್ಲವು. ಸರ್ವಶಕ್ತನಾದ ಭಗವಂತನೇ ಇದನ್ನು ಪರಿಹರಿಸಬೇಕು. ಜನನೀ! ನೀನು ಅಕಾಲದಲ್ಲಿ ಬಂದಿರುವೆ. ಕಂಸನ ಪಕ್ಷದವರಾದ ನಿಶಾಚರರು ಪಹರೆ ಬರುವ ಹೊತ್ತಾಯಿತು. ನೀನಿನ್ನು ತೆರಳು.

[ಮಹಾರಾಣಿಯು ಮಗಳನ್ನು ಮುದ್ದಿಸಿ, ಕಣ್ಣೀರಿಡುತ್ತ ತೆರಳುವಳು.]




ಪರಾತ್ಪರಾಯನಮಃ!

ಶ್ರೀರಸ್ತು

# ಶ್ರೀ ಕೃಷ್ಣಲೀಲೆ

## ತೃತೀಯಾಂಕಂ.

### ಪ್ರಥಮರಂಗಂ.

**ಪ್ರದೇಶ:—ಸೆರೆಮನೆಯ ಮುಂಭಾಗದ ಪಾಕಶಾಲೆ.**



ಲಲಿತೆ :—ಅಗೋ! ವಿಶ್ವಪುರುಷನು ತನ್ನ ಪ್ರೇಯಸಿಯಾದ ಪ್ರಾಗ್ದಿಶಾಂಗನೆಯ ಬೈತಲೆಗಲಂಕರಿಸಿದ ನವರತ್ನ ಪದಕದಂತೆ ಸೂರ್ಯ ಬಿಂಬವು ಅರುಣ ಕಾಂತಿಯಿಂದ ಈಗೀಗಲೆ, ಉದಯವಾಗುತ್ತಿರುವುದು. ಪ್ರಪಂಚದಲ್ಲಿ ಜನರೆಲ್ಲರೂ ಹಗಲು ವೇಳೆಯಲ್ಲಿ ಕಾರ್ಯಭಾರಗಳನ್ನು ನಡಿಸಿ, ರಾತ್ರಿ ಕಾಲದಲ್ಲಿ ನಿದ್ರಿಸುವುದು ಸಹಜವಾಗಿದೆ. ನಮ್ಮ ಮಹಾರಾಜನಾದ ಕಂಸನಾದರೋ ರಾತ್ರಿಯಲ್ಲಿ ತನ್ನ ವ್ಯವಹಾರಗಳನ್ನು ನಡಿಸುತ್ತ, ಹಗಲು ವೇಳೆಯಲ್ಲಿ ನಿದ್ರಿಸುವನು. ಇದೊಂದು ವಿಲಕ್ಷಣ ವ್ಯಾಪಾರವೇನು! ಇದೊಂದೇಯೆಂದು ಹೇಳಲೇಕೆ? ಅವನು ಮಾಡುವ ಕಾರ್ಯಗಳೆಲ್ಲವೂ ವಿಲಕ್ಷಣವಾದುವುಗಳಾಗಿಯೇ ಇರುವುವು! ಪರಂತು ಕಂಸನು

ಮಾಡುವ ದುಷ್ಕೃತ್ಯಗಳಿಂದ ಅವನು ಕ್ಷಿಪ್ರದಲ್ಲಿಯೇ ವಿನಾಶವಾಗಬಹುದೆಂದು ತೋರುವುದು. ಧರ್ಮಾಧರ್ಮಗಳನ್ನು ವಿಚಾರಿಸತಕ್ಕ ಸರ್ವಸಾಕ್ಷಿಯೊಬ್ಬನಿರುವನಲ್ಲವೆ! ಆತನ ಸಂಕಲ್ಪವಿದ್ದಂತಾಗಲಿ! ನಾನಿನ್ನು ನಾವಕಾಶಮಾಡದೆ, ದೇವಕೀವಸುದೇವರಿಗೆ ಆಹಾರವನ್ನು ಸಿದ್ಧಪಡಿಸುವೆನು.

[ಎಂದು ನಿಷ್ಕ್ರಮಿಸುವಳು.]

ಪ್ರದೇಶ:—ಮಧುರಾಪಟ್ಟಣದ ಕಾರಾಗೃಹ.

[ದೇವಕೀವಸುದೇವರು ಸೆರೆಯಲ್ಲಿ ಬಂಧಿಸಲ್ಪಟ್ಟು ಚಿಂತಿಸುತ್ತಿರುವರು.]

ದೇವಕಿ:— ರಾಗ—ಧನ್ಯಾಸಿ—ಅಟ.

ಕರುಣಾಕರದೇವದೇವಾ! ॥ ಪ ॥ ನರಹರಿಸರ್ವೋತ್ತಮದಿವ್ಯಭಾವಾ ॥ ಕರು ॥ ಅಪ ॥
ಕಂಸನೀಪರಿಕಠಿನಕೋಪದಿ, ಹಿಂಸೆಗೈಯ್ಯುತಲಿರ್ಪನಾಕುಲಪಾಂಸನನುಸಂಹರಿಸು ಬೇಗನೆ, ಹಂಸವಾಹನಮಿತ್ರಬೇಡುವೆ ॥ ಕರು ॥

ಆಹಾ! ಪ್ರಪಂಚದಲ್ಲಿ ನನ್ನಂತಹ ನಿರ್ಭಾಗ್ಯರು ಮತ್ತಾರಾದರೂ ಇರುವರೆ? ಒಡಹುಟ್ಟಿದವಳಾದ ತಂಗಿಯನ್ನು ಧನಕನಕವಸ್ತ್ರವಾಹನಾದಿಗಳಿಂದ ಸತ್ಕರಿಸತಕ್ಕ ಅಗ್ರಜನಿಂದಲೇ ಅತಿ ನೀಚವಾದ ಕಷ್ಟನಷ್ಟಗಳನ್ನು ಅನುಭವಿಸುತ್ತಲಿರುವ ಭಾಗ್ಯಹೀನಳು ನಾನೊಬ್ಬಳಲ್ಲದೆ, ಈಲೋಕದಲ್ಲಿ ಮತ್ತಾರಾದರೂ ಇರುವರೆ? ಹರಿಹರೀ! ಈ ದುರದೃಷ್ಟವು ನನ್ನೊಬ್ಬಳೊಂದಿಗೇ ಪರಿಸಮಾಪ್ತಿ ಹೊಂದಲಿ. ಇಂತಹ ಘೋರಕಷ್ಟವು ಮತ್ತಾವ ರಮಣಿಗೂ ಬಾರದಿರಲಿ. ಹಾ! ದೈವವೇ! ಈವರಿವಿಗೆ ನನ್ನಹೊಟ್ಟೆಯಲ್ಲಿ ಹುಟ್ಟಿದ ಆರು ಮಂದಿ ಮಕ್ಕಳೂ ನನ್ನ ಕಣ್ಣೆದುರಿನಲ್ಲಿಯೇ ದುರಾತ್ಮನಾದ ಕಂಸನಿಂದ ಹತವಾದುವು. ಏಳನೆಯ ಸಾರಿ ಗರ್ಭಸ್ರಾವವಾಯಿತು. ಈಗ ಪುನಃ ಪೂರ್ಣಗರ್ಭವತಿಯಾಗಿರುವೆನು. ಆದರೇನುಫಲ? ಯಾವ ಸುಖವನ್ನು ಪಡೆಯಬೇಕು? ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳನ್ನು, ಕಣ್ಣಾರ ನೋಡಿ, ಕೈಯ್ಯಾರ ಸಲಹಿ, ಮುದ್ದಾಡಿ ಆನಂದಿಸುವ ಭಾಗ್ಯವು ನನ್ನಹಣೆಯಲ್ಲಿ ಬರೆಯಲಿಲ್ಲ. ಗರ್ಭವತಿಯಾದ ನನಗೆ ಯಾವ ವಿಧವಾದ ಸುಖವೂ ಇಲ್ಲ

ದಿದ್ದರೂ, ದುಃಖಪರಂಪರೆಯು ದಿನದಿನಕ್ಕೂ ಹೆಚ್ಚುತ್ತಿದೆ. ಅಕಟಾ! ಈದುರ್ಭರ ಗರ್ಭವೇದನೆಯನ್ನೆಂತು ಸಹಿಸಲಿ? ಅಯ್ಯೋ! ದೈವವೇ! ನಿನಗಾದರೂ ಕರುಣವಿಲ್ಲವೆ?

ಶಾ ॥ ಓಕಲ್ಯಾಣಮಯಸ್ವರೂಪ! ವರದಾ! ಓಂಕಾರತತ್ವಪ್ರದಾ। ಓಕಾರುಣ್ಯಗುಣಪ್ರಕಾಶ! ಸುಕೃತೀ! ಓಸತ್ಯಸಂವರ್ಧಕಾ। ಓವೈಕುಂಠನಿಧಾನ! ದೀನಶರಣಾ! ಓನಿರ್ಮಲಾ! ನಿಷ್ಕಲಾ। ಓಕಂಜಾಕ್ಷ! ಪರಾತ್ಪರಾ! ಶುಭಕರಾ! ಮಾಂಪಾಹಿ! ಮಾಂಪಾಹಿಮಾಂ॥

ಕರುಣಾಸಮುದ್ರನಾದ ಭಗವಂತನೇ! ನಿನ್ನ ಸಂಕಲ್ಪವು ಯಾವತೆರನಾಗಿರುವುದೋ ನಾನೇನು ಬಲ್ಲೆನು? ನೀನು ಸರ್ವಜ್ಞನು! ನಾನು ಅಲ್ಪಜ್ಞಳು. ನೀನು ಸರ್ವಾಂತರ್ಯಾಮಿಯು! ನಾನು ಸಾಮಾನ್ಯಳು. ನೀನು ಸಚ್ಚಿದಾನಂದಮೂರ್ತಿಯು! ನಾನು ವ್ಯಾಕುಲಚಿತ್ತಳು. ನೀನು ದಾತನು! ನಾನು ಆಶ್ರಿತಳು, ದೇವಾದಿದೇವನೇ! ನಿನ್ನ ಮಹಾಶಾಸನವನ್ನು ಮೀರಿ ನಡೆಯತಕ್ಕವರಾರು? ಎಲ್ಲವೂ ನಿನ್ನಧೀನವು! ನಿನ್ನನುಗ್ರಹವಿದ್ದಂತೆ ನಡೆಯಲಿ! ಜಗನ್ನಾಥಾ! ನಿನ್ನ ಶರಣುಹೊಕ್ಕಿರುವೆವು! ಅನಂತಾ! ನಿನಗನಂತ ಕೋಟಿ ನಮಸ್ಕಾರಗಳು!

[ಎಂದು ದೇವಕಿಯು ಆಯಾಸದಿಂದ ನೆಲಕ್ಕೆರಗುವಳು.]

ವಸುದೇವ:—[ದೇವಕಿಯನ್ನು ಸಂತೈಸುತ್ತ ಸಮಾಧಾನ ಹೇಳುವನು.]

ರಾಗ—ನೀಲಾಂಬರಿ—ಅಟ.

ನಳಿನಾಯತಾಂಬಕಿಏಳು! ಕಷ್ಟತಾಳು! ॥ ಪ ॥ ಕಳೆದಜನ್ಮದಿಗೈದಕಲುಷದ ಫಲವಿದು, ಕಳವಳಪಡಿಸುತಲಿಹುದು, ಬಾಧಿಪುದು ॥ ನಳಿ ॥ ಅ-ಪ ॥ ಪರ್ವೇಂದುಮುಖಿಲಾಲಿಸಿದನು, ಪೇಳ್ವುದನು। ಪೂರ್ವಕರ್ಮದ ಪಾಪ, ಕಂಸರೂಪದಿಬಂದು, ಚರ್ವಿಸುತ್ತಿಹುದೆಮ್ಮನಿಂತು, ದುರ್ಭರದಿ ॥ ನಳಿ ॥

ಪ್ರಿಯೇ! ಸ್ವಲ್ಪ ಸೈರಿಸಿಕೊ. ಚಿಂತಿಸಿ ಫಲವೇನು? ಕಾರಾಗೃಹದಲ್ಲಿ ಬಂಧಿತರಾಗಿರುವ ನಾವು ಏನು ಮಾಡಬಲ್ಲೆವು? ಹಿಂದಿನ

ಜನ್ಮದಲ್ಲಿ ನಾವು ಎಷ್ಟು ಶಿಶುಹತ್ಯೆಗಳನ್ನು ಮಾಡಿದ್ದೆವೋ ಆ ಪಾಪಕರ್ಮದ ಫಲವನ್ನು ಈಗ ಅನುಭವಿಸುತ್ತಿರುವೆವು. ಮಾಡಿದ ಕರ್ಮವು ಬೇಡವೆಂದರೆ ಹೋಗುವುದೆ? ಈಸಮಯದಲ್ಲಿ ಮನೋಧೈರ್ಯವೊಂದಲ್ಲದೆ ನಮಗೆ ಮತ್ತಾವ ಪರಿಹಾರವೂ ಸಾಧ್ಯವಿಲ್ಲವು. ಪ್ರಿಯಸೀ! ಏಳು! ಏಳು!

ದೇವಕಿ:—ನಾಥಾ! ದುರ್ಭರವಾದ ಗರ್ಭವೇದನೆಯು ತಾಳಲಶಕ್ಯವಾಗಿರುವುದು. ನಾನೇನು ಮಾಡಲಿ?

ವಸುದೇವ:—ಸಾಧ್ವೀ! ದುಃಖಿಸಬೇಡ. ಸ್ವಲ್ಪ ಸೈರಿಸು. ದೈವವಿಲಾಸ ಈರೀತಿಯಾಗಿರುವಲ್ಲಿ ನಾವು ಮಾಡತಕ್ಕುದೇನು? ನಮ್ಮ ಯತ್ನವೇನಿದೆ?

[ಎಂದು, ವಸುದೇವನು ಸ್ವಲ್ಪ ಹೊತ್ತು ತನ್ನಲ್ಲಿ ಚಿಂತಿಸುತ್ತಿದ್ದು, ಕೈಮುಗಿದು ದೇವರನ್ನು ಪ್ರಾರ್ಥಿಸುವನು.]

ಶ್ಲೋ॥ ತ್ವಮೇವಮಾತಾಚಪಿತಾತ್ವಮೇವ। ತ್ವಮೇವಬಂಧುರ್ಗತಿಶ್ಚತ್ವಮೇವ॥
ತ್ವಮೇವವಿದ್ಯಾದ್ರವಿಣಂತ್ವಮೇವ। ತ್ವಮೇವಸರ್ವಂ ಮಮದೇವದೇವ।
ಅನ್ಯಥಾಶರಣಂನಾಸ್ತಿ, ತ್ವಮೇವಶರಣಂಮಮ। ತಸ್ಮಾತ್ಕಾರುಣ್ಯಭಾವೇನ, ರಕ್ಷರಕ್ಷಜನಾರ್ದನ॥

ದೇವಾ! ದೇವಾದಿದೇವಾ! ದೇವತಾಸಾರ್ವಭೌಮಾ! ಸಹಿಸಲಶಕ್ಯವಾದ ಈ ಘೋರಸಂಕಟದಿಂದ ನಮ್ಮನ್ನುದ್ಧರಿಸು. ಈ ವಿಪತ್ತಿನಿಂದ ನಮ್ಮನ್ನು ಪಾರುಮಾಡಿ ರಕ್ಷಿಸತಕ್ಕ ಕರ್ತನು ನೀನಲ್ಲದೆ ಮತ್ತಾರು? ನಮಗೆ ನೀನೇ ತಾಯಿಯು, ನೀನೇ ತಂದೆಯು, ನೀನೇ ಬಂಧುವು, ನೀನೇ ವಿದ್ಯೆಯು, ನೀನೇ ಧನವು, ನೀನೇ ಗತಿಯು, ನೀನೇ ಮತಿಯು, ಸರ್ವವೂ ನೀನೇ. ನಿನ್ನ ಹೊರತು ಅನ್ಯರಿಲ್ಲವು ಅನಾಥರಕ್ಷಕನೆ! ಅಪ್ರಮೇಯನೆ! ಆಶ್ರಿತಮಂದಾರನೆ! ಕರುಣಾಸಮುದ್ರನೆ! ಕಾಪಾಡು. [ಎಂದು ಪ್ರಾರ್ಥಿಸುತ್ತ ಅಂಜಲೀಬದ್ಧನಾಗಿ ಮೇಲಕ್ಕೆ ನೋಡುತ್ತಿರುವನು]



## ತ್ರುತೀಯಾಂಕಂ—ದ್ವಿತೀಯರಂಗಂ.

[ಬ್ರಹ್ಮಾದಿ ದೇವತೆಗಳು, ದೇವಕೀವಸುದೇವರಿರುವ ಕಾರಾಗೃಹಕ್ಕೆ ಪ್ರವೇಶಿಸಿ ಭಗವಂತನನ್ನು ಸ್ತೋತ್ರಮಾಡುವರು.]

ದೇವತೆಗಳು:—

ಶ್ಲೋ॥ ಸತ್ಯವ್ರತಂಸತ್ಯಪರಂತ್ರಿಸತ್ಯಂ। ಸತ್ಯಸ್ಯಮೂಲಂನಿಹಿತಂಚಸತ್ಯೇ। ಸತ್ಯಸ್ಯಸತ್ಯಂಋತಸತ್ಯನೇತ್ರಂ। ಸತ್ಯಾತ್ಮಕಂತ್ವಾಂಶರಣಂಪ್ರಪನ್ನಾಃ॥

ಎಲೈ ಭಗವಂತನೇ! ನಂಬಿದವರನ್ನು ಕಾಪಾಡತಕ್ಕ ಪ್ರತಿಜ್ಞೆಯುಳ್ಳವನಾದುದರಿಂದ ಶರಣಾಗತರಕ್ಷಕನೆಂತಲೂ, ಮುನ್ನು ಮಾಡಿದ ಪ್ರತಿಜ್ಞೆಯನ್ನು ಪರಿಪಾಲಿಸುವುದಕ್ಕಾಗಿ ದೇವಕಿಯ ಗರ್ಭವನ್ನು ಹೊಕ್ಕಿರುವೆಯಾದುದರಿಂದ ಸತ್ಯಸಂಕಲ್ಪನೆಂತಲೂ, ಮಹಾತ್ಮರಾದ ಬ್ರಹ್ಮವೇತ್ತರಿಂದ ಹೊಗಳಿಸಿಕೊಳ್ಳತಕ್ಕ ಪ್ರಭುವು ನೀನೇ ಸರಿ. ವೇದಾಂತವೇದ್ಯನಾದ ನಿನ್ನ ಸಾಯುಜ್ಯವನ್ನು ಪಡೆಯುವುದಕ್ಕೆ ಸತ್ಯವ್ರತವೇ ಪರಮಸಾಧನವು. ಪೃಥಿವ್ಯಪ್ತೇಜೋವಾಯುರಾಕಾಶಗಳೆಂಬ ಪಂಚಭೂತಗಳಿಗೆ ಕಾರಣನಾಗಿಯೂ, ಅಂತರ್ಯಾಮಿಯಾಗಿಯೂ, ದಿಗ್ದೇಶಕಾಲವ್ಯವಸ್ಥೆಗಳಿಗತೀತನಾಗಿಯೂ, ಆದಿಮಧ್ಯಾಂತರಹಿತನಾಗಿಯೂ ಇರುವ ಸರ್ವತಂತ್ರ ಸ್ವತಂತ್ರನಾದ ನಿನ್ನ ಮರೆ ಹೊಕ್ಕಿರುವೆವು. ಜಗನ್ನಾಥಾ! ಬೇಗ ಅವತರಿಸು.

ಮಹೇಶ್ವರ:—ಎಲೈ ಕಮಲಾಕ್ಷನೆ! ಪ್ರಸನ್ನನಾಗು. ನಿನ್ನ ಅವತಾರವನ್ನು ಎದುರು ನೋಡುತ್ತಿರುವ ದೇವತೆಗಳ ಮನಸ್ಸನ್ನು ಸಂತೋಷಪಡಿಸು.

ಬ್ರಹ್ಮ:—ಲಕ್ಷ್ಮೀರಮಣ! ದೇವಕಿಯ ಗರ್ಭದಿಂದ ಬೇಗನೆ ಅವತರಿಸು. ನಿನ್ನ ಅಪ್ರಾಕೃತ ದಿವ್ಯ ಮಂಗಳ ಸ್ವರೂಪವನ್ನು ನೋಡಬೇಕೆಂದು ಅತ್ಯಂತ ಶ್ರದ್ಧಾಭಕ್ತಿಗಳಿಂದ ಕಾದಿರುವ, ಬ್ರಹ್ಮಋಷಿ, ರಾಜಋಷಿ, ದೇವಋಷಿ ಪ್ರಮುಖರನ್ನು ಆನಂದಗೊಳಿಸು.

ನಾರದ:— ಸೀ॥ ದಂಡವು ಯೋಗೀಂದ್ರ ತಂಡವಿನೋದಿಗೆ, ದಂಡವಶೇಷ ಬ್ರಹ್ಮಾಂಡಮಯಗೆ। ದಂಡವುಮಂಡಿತಕುಂಡಲದ್ವಯನಿಗೆ

ದಂಡವಸುರಗರ್ವಖಂಡನನಿಗೆ । ದಂಡವುತ್ತಮವೇದಂಡರಕ್ಷಕನಿಗೆ ದಂಡವುದಿವ್ಯಕೋದಂಡಧರಗೆ । ದಂಡವುಪೂರ್ಣೇಂದುಮಂಡಲವದನಗೆ, ದಂಡವಪ್ರಾಕೃತಪಂಡಿತನಿಗೆ ॥

ಗೀ ॥ ದಂಡವದ್ಭುತವಿಕ್ರಮಭುಜಂಡನನಿಗೆ । ದಂಡವಾನಂದಶಾಂತರಸಾಕರನಿಗೆ ।
ದಂಡವಾಶ್ರಿತರಕ್ಷಣತತ್ಪರನಿಗೆ । ದಂಡವುತ್ತಮವೈಕುಂಠಧಾಮನಿನಗೆ ॥

ರಮಾರಮಣನೆ! ನಿನ್ನ ಅವತಾರವು ಕಂಸಾದಿ ದುಷ್ಟದನುಜರನ್ನು ಸಂಹರಿಸುವುದಕ್ಕೆ ಮಾತ್ರವೇ ಅಲ್ಲ. ಭವಸಾಗರವನ್ನುತ್ತರಿಸಿ ಶಾಶ್ವತ ಬ್ರಹ್ಮಾನಂದವನ್ನು ಹೊಂದಬೇಕೆಂಬ ಅಭಿಲಾಷೆಯಿಂದ ನಿನ್ನ ಆಗಮನವನ್ನೇ ಚಿರಕಾಲದಿಂದಲೂ ಎದುರು ನೋಡುತ್ತಿರುವ ಭಕ್ತರು, ಮುಕ್ತರು, ತ್ಯಾಗಿಗಳು, ಭೋಗಿಗಳು, ಯೋಗಿಗಳು ಮುಂತಾದ ಅನೇಕಾನೇಕ ಮಹಾಜನರಿಗೆ ಪರಮಾರ್ಥಲಾಭವನ್ನುಂಟುಮಾಡತಕ್ಕುದಾಗಿದೆ. ಆದುದರಿಂದ ನಿನ್ನ ಸಂದರ್ಶನವು ಕ್ಷಿಪ್ರದಲ್ಲಿಯೇ ಆಗಬೇಕಾಗಿದೆ. ಆಶ್ರಿತಪಾರಿಜಾತನೇ! ದೇವಕಿಯ ಗರ್ಭದಿಂದ ಬೇಗನೆ ಅವತರಿಸು.

[ಎಂದು ನಾರದರು ಭಗವಂತನನ್ನು ಸ್ತೋತ್ರಮಾಡಿದನಂತರ ದೇವಕೀವಸುದೇವರಿಗೆ ಸಂತೋಷವನ್ನು ಸೂಚಿಸುವರು.]

ನಾರದ:—ಅಮ್ಮಾ ದೇವಕಿ! ನಿನ್ನ ಗರ್ಭದಲ್ಲಿ ಪುರಾಣಪುರುಷನಾದ ಭಗವಂತನು ಅಪಾರ ತೇಜೋಭಿರಾಮನಾಗಿ ಕಂಗೊಳಿಸುತ್ತಿರುವನು. ಕ್ಷಿಪ್ರದಲ್ಲಿಯೇ ನಿನ್ನ ಪುತ್ರನಾಗಿ ಅವತರಿಸುವನು. ನಿಮ್ಮ ಕಷ್ಟಗಳೆಲ್ಲವೂ ಪರಿಹಾರವಾದುವು. ಇನ್ನು ನಿಮಗೆ ಕಂಸಾದಿ ದುಷ್ಟರಿಂದ ಲೇಶಮಾತ್ರವೂ ಭಯವಿಲ್ಲವು. ಸಾಧ್ವೀಮಣಿಯೆ! ನೀನೇ ಧನ್ಯಳು. ಎಲೈ ವಸುದೇವನೆ! ನಿನ್ನ ಪುಣ್ಯವೇ ಪುಣ್ಯವು. ದಂಪತಿಗಳಾದ ನೀವಿಬ್ಬರೂ ಪರಮ ಪುಣ್ಯಾತ್ಮರು. ನಿಮ್ಮ ಸಂದರ್ಶನವೇ ನಮಗೆ ಭಾಗ್ಯೋದಯವು.

ದೇವಕೀವಸುದೇವರು:—ಪೂಜ್ಯರೇ! ತಮ್ಮೆಲ್ಲರಿಗೂ ವಂದಿಸುವೆವು.

[ಎಂದು ಬ್ರಹ್ಮಾದಿ ದೇವತೆಗಳಿಗೂ, ನಾರದರಿಗೂ ಕೈಮುಗಿದು ವಂದಿಸುವರು.]

ದೇವಮುನಿಗಳೆಲ್ಲರೂ:—ಪುಣ್ಯಾತ್ಮರೇ! ನಿಮಗೆಮಂಗಳವಾಗಲಿ.

[ಬ್ರಹ್ಮಾದಿಗಳೆಲ್ಲರೂ ನಿಷ್ಕ್ರಮಿಸುವರು.]

ದೇವಕೀ ವಸುದೇವರು ತಮ್ಮ ಹಾಸುಗೆಯ ಬಳಿಗೆ ಬಂದ ತಕ್ಷಣವೇ ಅಗಾಧವಾದ ಶಬ್ದವುಂಟಾಗುವುದು. ಶಬ್ದದೊಂದಿಗೆ ಕೋಟಿ ಸೂರ್ಯಪ್ರಕಾಶವಾದ ದಿವ್ಯ ತೇಜಸ್ಸುಂಟಾಗುವುದು. ಕೂಡಲೇ ಶ್ರೀಮನ್ನಾರಾಯಣನು ದೇವಕೀ ವಸುದೇವರಿಗೆ ಪ್ರತ್ಯಕ್ಷವಾಗಿ ಸಂದರ್ಶನ ಕೊಡುವನು.





ದೇವತೆಗಳು ಪೂಮಳೆ ಕರೆಯುವರು.

(ವಸುದೇವನು ಭಗವಂತನನ್ನು ನೋಡಿದಕೂಡಲೇ, ನಮ್ರಭಾವದಿಂದಲೂ, ಭಕ್ತಿ ವಿಶ್ವಾಸಗಳಿಂದಲೂ, ಅಂಜಲೀಬದ್ಧನಾಗಿ ಸ್ತೋತ್ರ ಮಾಡುವನು.

**ವಸುದೇವ:—** ಮೋಹನ ಅಥವಾ ಧನ್ಯಾಸಿ—ಅಟ.

ಸ್ವಾಗತವು ಶ್ರೀ ರಮಾರಮಣನಿನಗೆ ॥ಪ॥
ಯೋಗೀಂದ್ರಚಿತ್ತ ಸಂಚಾರ ನಿನಗೆ ॥ಸ್ವಾಗತ॥ ಅ-ಪ॥
ಧೀರನಿಗೆ ಸಜ್ಜನಾಧಾರನಿಗೆ ಪರಮಗಂಭೀರನಿಗೆ ನಿತ್ಯಶೃಂಗಾರನಿನಗೆ ।
ಶೂರನಿಗೆ ಸುಗುಣವಿಸ್ತಾರನಿಗೆ ವರನಿರ್ವಿಕಾರನಿಗೆ ದುಃಖ ಸಂಹಾರನಿನಗೆ॥
॥ಸ್ವಾಗತ॥

ಚಂದ್ರನಿಗೆ ದಿವ್ಯಗುಣ ಸಾಂದ್ರನಿಗೆ ಸದ್ಗುಣಿಸ್ತೋಂದ್ರನಿಗೆ ಧರ್ಮಸಂಕ್ರಂದ
ನನಿಗೆ। ಬೃಂದಾರಕಾವಳೀವಂದ್ಯನಿಗೆ ಸತತ ಸ್ವಚ್ಛಂದನಿಗೆ ನಿರ್ಮಲಾನಂದ
ನಿನಗೆ ॥ಸ್ವಾಗತ॥
ಶೀಲನಿಗೆ ಭಕ್ತಜನ ಲೋಲನಿಗೆ ಸರ್ವಪರಿಪಾಲನಿಗನಂತಜಗಮೂಲನಿನಗೆ
ಕಾಲಾನುಕೂಲ ಶುಭಲೀಲಾವಿನೋದಗುಣಜಾಲನಿಗೆ ಶಿವರಾಮಪಾಲ
ನಿನಗೆ ॥ ಸ್ವಾಗತ ॥

ಪರಮಾತ್ಮನೆ! ಅನಂತಕೋಟಿ ಬ್ರಹ್ಮಾಂಡಗಳಿಗೆ ಒಡೆಯನಾಗಿಯೂ, ಸರ್ವಸಾಕ್ಷಿಯಾಗಿ ಸಮಸ್ತವನ್ನೂ ನೋಡತಕ್ಕವನಾಗಿಯೂ, ಜ್ಞಾನಾನಂದಸ್ವರೂಪನಾಗಿಯೂ, ಸರ್ವತಂತ್ರ ಸ್ವತಂತ್ರನಾಗಿಯೂ, ಸರ್ವಾಧಿಕಾರಿಯಾಗಿಯೂ, ಸರ್ವಾಂತರ್ಯಾಮಿಯಾಗಿಯೂ, ಸರ್ವಜ್ಞತ್ವ ಸರ್ವಶಕ್ತಿತ್ವಾದಿ ಷಡ್ಗುಣೈಶ್ವರ್ಯ ಸಂಪನ್ನನಾಗಿಯೂ, ವಾತ್ಸಲ್ಯ, ಅಭಯಪ್ರದಾನ, ಅರ್ತಿಪರಿಹಾರಾದಿ ಕಲ್ಯಾಣಗುಣ ಪರಿಪೂರ್ಣನಾಗಿಯೂ, ಕರುಣಾಸಮುದ್ರನಾಗಿಯೂ, ವಾಚಾಮಗೋಚರನಾಗಿಯೂ ಜ್ಞಾನನೇತ್ರಗೋಚರನಾಗಿಯೂ ಇರುವ ನೀನು, ಪಾಮರರಾದ ನಮ್ಮನ್ನು ಕಟಾಕ್ಷಿಸಲೆಳಸಿ ನಿನ್ನೀ ಅಪ್ರಾಕೃತ ದಿವ್ಯಮಂಗಳಸ್ವರೂಪ ಸಂದರ್ಶನವನ್ನು ನಮಗನುಗ್ರಹಿಸಿರುವುದನ್ನು ನೋಡಿದರೆ, ನಿನ್ನ ಅವ್ಯಾಜಕಾರುಣ್ಯವು ಚೆನ್ನಾಗಿ ವ್ಯಕ್ತವಾಗುತ್ತದೆ. "ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ" ಎಂಬ ನಿನ್ನ ಸನಾತನ ಧರ್ಮಸೂತ್ರದಂತೆ, ನಿನಗಧೀನವಾದ ಮಾಯೆಯನ್ನವಲಂಬಿಸಿ ಇಚ್ಛಾಮಾತ್ರವಾದ ದಿವ್ಯಶರೀರ ಪರಿಗ್ರಹವನ್ನು ಮಾಡುತ್ತಿರುವ ನಿನ್ನ ದಿವ್ಯ ಮಹಿಮೆಯನ್ನು ಬಣ್ಣಿಸಲು ನಾನೆಷ್ಟರವನು ? ಪರಬ್ರಹ್ಮಸ್ವರೂಪನೆ! ಪರಮತಪೋಧನರಾದ ಯೋಗಿಗಳ ಜ್ಞಾನಚಕ್ಷುಗಳಿಗೆ ಪಾತ್ರವಾದ ಈ ನಿನ್ನ ತೇಜೋಮಯಾಕಾರವು ಕೇವಲ ದುಃಖಭಾಜನರಾದ ನಮಗೆ ಲಭಿಸಿದುದರಿಂದ ನಾವು ಧನ್ಯರಾದೆವು. ಶರಣಾಗತರಾದ ನಾವು ನಿನ್ನವರಾಗಿರುವೆವು. ನಮ್ಮನ್ನು ಆಜ್ಞಾಪಿಸತಕ್ಕ ಪ್ರಭುವು ನೀನಾಗಿರುವೆ. ಪರಂಧಾಮನೆ! ನಿನ್ನ ಚಿತ್ತವೇ ನಮ್ಮಭಾಗ್ಯವು!

(ಎಂದು ವಸುದೇವನು ನಮಸ್ಕರಿಸುವನು.)

ದೇವಕಿ:—ಭಕ್ತತ್ರಾಣಪರಾಯಣನಾದ ಶ್ರೀಮನ್ನಾರಾಯಣನೆ! ಲಕ್ಷ್ಮೀವಲ್ಲಭನೆ! ಲಾವಣ್ಯಮೂರ್ತಿಯೆ! ಅನಂತನಾಮರೂಪಗಳನ್ನೂ

ಅನಂತಕ್ರಿಯಾಕಲಾಪಗಳನ್ನೂ ಉಂಟಾಗಿ, ಜಗತ್ಕಾರಣನಾಗಿ, ಸರ್ವೈಶ್ವರ್ಯ ಸಂಪನ್ನನಾಗಿ ಸರ್ವಮಂಗಳಪ್ರದಾಯಕನಾಗಿ, ಸರ್ವತೋಭದ್ರನಾಗಿ ವಿರಾಜಿಸುತ್ತಿರುವ ಭಗವಂತನೇ! ನಿನಗನಂತಕೋಟಿ ನಮಸ್ಕಾರಗಳನ್ನು ಸಮರ್ಪಿಸುತ್ತಿರುವೆನು. ಕರುಣಾಸಮುದ್ರನೆ! ದುರಾತ್ಮನಾದ ಕಂಸನಿಂದ ಬಂಧಿಸಲ್ಪಟ್ಟು, ಬಗೆಬಗೆಯಾಗಿ ಬಳಲುತ್ತಿರುವ ನಮಗೆ ನಿನ್ನ ದಿವ್ಯ ಮಂಗಳಸ್ವರೂಪ ಸಂದರ್ಶನವುಲಭಿಸುವುದೆಂದರೆ, ಅದು ನಮ್ಮ ಭಾಗ್ಯೋದಯವೇ ಸರಿ. ಭಕ್ತವತ್ಸಲನೆ! ಯಾರು ನಿನ್ನ ಪಾದಾರವಿಂದಗಳಲ್ಲಿ ಅಚಂಚಲವಾದ ಭಕ್ತಿಯನ್ನಿಟ್ಟು, ಅನನ್ಯಶರಣ್ಯರಾಗಿರುವರೋ ಅಂತಹ ಪರಮಸಾಧುಗಳ ಕ್ಷೇಮಲಾಭಗಳನ್ನು ನೀನೇ ವಹಿಸಿಕೊಂಡು ಕಾಪಾಡುವೆ. ಇಂದಿರಾರಮಣ! ಇಭರಾಜಗಮನ! ಸುಂದರಾಕಾರ! ಮಂದರೋದ್ಧಾರ! ಅನಾಥರಕ್ಷಕ ಅಸುರಭಂಜನ! ಆನಂದನಿಲಯ! ಜಗದೇಕಸಾರ್ವಭೌಮ! ಸರ್ವಾಂತರ್ಯಾಮಿಯಾದ ನೀನು ಎಲ್ಲೆಲ್ಲಿಯೂ ವ್ಯಾಪಿಸಿರುವೆ. ನೀನಿಲ್ಲದ ಸ್ಥಳವಾವುದು? ಸರ್ವತ್ರ ತುಂಬಿರುವೆ. ಅತ್ಯಂತ ಹೇಯವಾಗಿ ಭಾವಿಸುತ್ತಿದ್ದ ಕಾರಾಗೃಹದಲ್ಲಿಯೇ ನಿನ್ನ ಸಂದರ್ಶನವು ನಮಗೆ ಲಭಿಸಿತಾದುದರಿಂದ ಇದನ್ನು ಸೆರೆಮನೆಯೆಂದು ಯಾರು ಹೇಳಬಲ್ಲರು? ಈ ಸೆರೆಮನೆಗುಂಟಾದ ಮಹಾಭಾಗ್ಯವು ಯಾವ ಅರಮನೆಗೂ ಉಂಟಾಗಲಿಲ್ಲ. ಸಚ್ಚಿದಾನಂದಮೂರ್ತಿಯೆ! ನಮಗೆ ನಿನ್ನ ಚರಣಕಮಲಗಳಲ್ಲಿ ಸ್ಥಿರವಾದ ಭಕ್ತಿಯೂ, ನಿನ್ನ ಭಕ್ತರೊಂದಿಗೆ ಬಾಂಧವ್ಯವೂ, ಅಪಾರ ಭೂತದಯೆಯೂ ಉಂಟಾಗಿರುವಂತೆ ಅನುಗ್ರಹಿಸು. ದೀನದಯಾಕರನೆ! ನಿನ್ನ ಚರಣಕಮಲಗಳಿಗೆ ವಂದಿಸುವೆನು.

[ಎಂದು ದೇವಕಿಯು ನಮಸ್ಕರಿಸುವಳು.]

ವಿಷ್ಣುವು:—ಅಮ್ಮಾ ದೇವಕಿಯೆ! ನಿಮ್ಮ ಭಕ್ತಿಗೆ ನಾನು ಮೆಚ್ಚಿದೆನು. ದಂಪತಿಗಳಾದ ನೀವಿಬ್ಬರೂ ಧನ್ಯಾತ್ಮರು. ನಿಮ್ಮ ಪೂರ್ವ ವೃತ್ತಾಂತವನ್ನು ಹೇಳುವೆನು ಕೇಳಿರಿ. ಮುನ್ನ ಸ್ವಾಯಂಭುವ ಮನ್ವಂತರದಲ್ಲಿ ನೀನು ಪೃಶ್ನಿಯೆಂಬ ಮಹಾಪತಿವ್ರತೆಯು. ಈತನು ಸುತಪನೆಂಬ ಪ್ರಜೇಶ್ವರನು. ನೀವಿಬ್ಬರೂ ಪ್ರಜಾಸೃಷ್ಟಿಗಾಗಿ ಬ್ರಹ್ಮನಿಂದ ನಿಯಮಿಸಲ್ಪಟ್ಟು, ಜಿತೇಂದ್ರಿಯರಾಗಿ ನನ್ನನ್ನು

ಕುರಿತು ಘೋರತಪವನ್ನಾಚರಿಸಿದಿರಿ. ನಿಮ್ಮ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾದ ನಾನು, ನಿಮಗೆ ಬೇಕಾದ ವರಗಳನ್ನು ಕೇಳಬಹುದೆಂದು ಸೂಚಿಸಲಾಗಿ, ನಿನ್ನಂತಹ ಪುತ್ರನಾಗಬೇಕೆಂದು ನೀವು ಬಯಸಿದಿರಿ. ಅದರಂತೆಯೇ ನಾನು ನಿಮಗೆ ಪುತ್ರನಾಗಿ ಅವತರಿಸಿ "ವೃಶ್ನಿಗರ್ಭ" ನೆಂಬ ಹೆಸರನ್ನು ಪಡೆದೆನು. ಬಳಿಕ ನೀವು ಅದಿತಿಕಶ್ಯಪರೆಂಬ ದಂಪತಿಗಳಾಗಿ ಹುಟ್ಟಲು ಪುನಃ ನಾನು ನಿಮಗೆ ಪುತ್ರನಾಗಿ ಅವತರಿಸಿ ವಾಮನ ನೆಂಬ ಹೆಸರನ್ನು ಪಡೆದೆನು. ಸಾಧ್ವೀಮಣಿಯೆ! ಮೂರನೆಯದಾದ ಈ ಜನ್ಮದಲ್ಲಿ ದೇವಕೀವಸುದೇವರೆಂಬ ದಂಪತಿಗಳಾಗಿರುವ ನಿಮಗೆ ಈಗಲೂ ನಾನು ಪುತ್ರನಾಗಿ ಅವತರಿಸಿರುವೆನು.

ದೇವಕಿ:—ಜಗನ್ನಾಥಾ! ನಿನ್ನ ಚಿತ್ರ ಚರಿತ್ರಗಳು ಅತ್ಯದ್ಭುತವಾಗಿರುವುವು.

ವಸುದೇವ:—ಪರಮಾತ್ಮನೆ! ನಿನ್ನ ಲೀಲಾವಿಶೇಷಗಳು ಅನನ್ಯಸಾಮಾನ್ಯವಾದುವುಗಳು.

ವಿಷ್ಣುವು:—ಎಲೈ ವಸುದೇವನೆ! ನೀನಿನ್ನು ಕಂಸನಿಗೆ ಹೆದರಬೇಕಾಗಿಲ್ಲವು. ಪರಂತು ಎಲ್ಲರಿಗೂ ಶ್ರೇಯಸ್ಕರವಾದ ರೀತಿಯಲ್ಲಿ ಕಾರ್ಯವನ್ನು ಸಾಧಿಸತಕ್ಕ ಸುಲಭೋಪಾಯವನ್ನು ಹೇಳುವೆನು. ಕೇಳು.

ವಸುದೇವ:—ಭಗವಂತನೆ! ಶಿರಸಾವಹಿಸಿ ಕೇಳುವೆನು.

ವಿಷ್ಣುವು:—ಗೋಕುಲದಲ್ಲಿ ನಂದಗೋಪನ ಸುಂದರಿಯಾದ ಯಶೋದಾದೇವಿಗೆ ಪುತ್ರಿಯಾಗಿ ನನ್ನ ಮಾಯಾಶಕ್ತಿಯು ಅವತರಿಸಿರುವಳು. ನೀನು ಈಗಲೇ ನನ್ನನ್ನು ಗೋಕುಲಕ್ಕೆ ಕರೆದುಕೊಂಡು ಹೋಗಿ ಯಶೋದೆಯ ಬಳಿಯಲಿಟ್ಟು, ಅಲ್ಲಿ ಶಿಶುರೂಪದಿಂದಿರುವ ಯೋಗಮಾಯೆಯನ್ನು ಇಲ್ಲಿಗೆ ಕರೆದುತರುವನಾಗು. ಈ ಕಾರಾಗೃಹದ ಬಾಗಿಲುಗಳೆಲ್ಲವೂ ತಾನಾಗಿಯೇ ತೆರೆಯುವುವು. ನಿನ್ನ ಕೈಕಾಲುಗಳಿಗೆ ಬಂಧಿಸಿರುವ ಸಂಕೋಲೆಗಳು ಮುರಿದುಹೋಗುವುವು. ದಾಟಲಶಕ್ಯವಾಗಿ ಕಾಣುವ ಯಮುನಾ ನದಿಯು ತಾನಾಗಿಯೇ ದಾರಿಯನ್ನು ಬಿಡುವುದು.

[ಎಂದು ವಸುದೇವನಿಗೆ ಕಾರ್ಯಕ್ರಮವನ್ನು ಸೂಚಿಸುತ್ತ ಭಗವಂತನು ಜಗನ್ಮೋಹನಕರವಾದ ಶಿಶುರೂಪವನ್ನು ಧರಿಸುವನು. ವಿಷ್ಣುರೂಪವು ಅದೃಶ್ಯವಾಗುವುದು. ದೇವಕಿಯು ಮಗುವನ್ನೆತ್ತಿಕೊಂಡು ಮುದ್ದಾಡುವಳು.]

ದೇವಕಿ :— ರಾಗ-ಆನಂದಭೈರವಿ-ಅಟ.

ಬಾಲ ಯದುಕುಲ ಪುಣ್ಯ ಮೂಲಾ, ವಿನುತಘನಲೀಲ ಶುಭಮಂಗಳ। ವಿಶಾಲಾ ॥ ಪ ॥

ನೀಲನೀರದವರ್ಣಲೋಲಾ, ಸುಜನಪರಿಪಾಲ ವರಸುಂದರ ಕಪೋಲಾ ॥ ಬಾಲ ॥ ಅ-ಪ ॥

ದೇವಮುನಿಹಿತಸಾರ್ವಭೌಮಾ, ಪರಮಗುಣಸೀಮಗೋವಿಂದಜಿತಕಾಮಾ!
ಶ್ರೀರಮಣವೈಕುಂಠಧಾಮಾ, ಸತ್ವಗುಣಸೋಮಶಿವರಾಮನುತನಾಮಾ ॥ ಬಾಲ ॥

[ಎಂದು ಮಗುವನ್ನು ಮುದ್ದಾಡುವಳು.]

ವಸುದೇವ:—ಪ್ರಿಯೆ! ಜಗದಾನಂದಕರವಾದ ನಗುಮುಖದಿಂದ ವಿರಾಜಿಸುತ್ತಿರುವ ಈ ಮುದ್ದು ಬಾಲನನ್ನು ನಿಮಿಷಮಾತ್ರವಾದರೂ ಮುದ್ದಾಡುವ ಭಾಗ್ಯವು ಲಭಿಸಿತಲ್ಲವೆ! ಯೋಗನಿಷ್ಠಾಗರಿಷ್ಠರಾದ ಮುನಿಪುಂಗವರಿಗೆ ಸಹಾ ಇಂತಹ ಭಾಗ್ಯವು ಲಭಿಸಲಾರದು.

[ಎಂದು ಬಣ್ಣಿಸುತ್ತ ದೇವಕಿಯ ಕೈಯಲ್ಲಿರುವ ಮಗುವನ್ನು ತನ್ನ ಕೈಗೆ ತೆಗೆದುಕೊಂಡು ಮುದ್ದಾಡುವನು.]

ದೇವಕಿ:—ಪ್ರಾಣೇಶ್ವರಾ! ಅನೇಕ ಜನ್ಮಗಳ ಪೂಜಾಫಲವೇ ಈ ಶಿಶುರೂಪವಾಗಿ ಮೂರ್ತೀಭವಿಸಿರುವುದು. ಪ್ರಿಯಾ! ಇತ್ತ ನೋಡಿರೀ ಬಾಲಕನ ಕಪೋಲಗಳೆಷ್ಟು ಮನೋಹರವಾಗಿ ಶೋಭಿಸುತ್ತಿರುವುವು! ಹಾ ನನ್ನ ಮುದ್ದು ಕಂದ! ಆನಂದ! ಮುಕುಂದ!

[ಎಂದು ದೇವಕಿಯು ಬಾರಿಬಾರಿಗೂ ಶಿಶುವನ್ನು ಮುದ್ದಾಡುವಳು.]

ವಸುದೇವ:—ದೇವೀ! ಮರತೆವು. ಮರತೆವು. ಮಗುವನ್ನಿಲ್ಲಿತಾ! ಹೊರಡುವೆನು!

ದೇವಕಿ :—(ಗಾಬರಿಯಿಂದ) ನಾಥಾ ! ಎಲ್ಲಿಗೆ ಹೊರಡುವಿರಿ ?

ವಸುದೇವ :—ಪ್ರಿಯೇ ! ಸಂತೋಷದ ಸಂಭ್ರಮದಲ್ಲಿ ಕರ್ತವ್ಯ ವನ್ನು ಮರತೇ ಬಿಟ್ಟೆವು. ಈ ಬಾಲಕನನ್ನು ಗೋಕುಲದಲ್ಲಿ ಬಿಟ್ಟು, ನಂದಗೋಪನ ಶಿಶುವನ್ನಿಲ್ಲಿಗೆ ತರಬೇಕಲ್ಲವೆ ?

ದೇವಕಿ :—ಹಾ ದೈವವೆ! ಈ ಸುಕುಮಾರನನ್ನು ಬಿಟ್ಟು ನಾ ನೆಂತು ಜೀವಿಸಲಿ ?

ವಸುದೇವ :—ದೇವೀ ! ಶೋಕಿಸಬೇಡ. ನಾವು ಹತಭಾಗ್ಯರು ಈ ಮುದ್ದುಕಂದನ ಬಾಲಲೀಲೆಗಳನ್ನು ನೋಡಿ ಆನಂದಿಸುವ ಭಾಗ್ಯವು ನಮಗೆ ಲಭ್ಯವಿಲ್ಲವು. ಸುಕೃತಜನ್ಮಳಾದ ಯಶೋದೆಯೂ, ಮಹಾತ್ಮನಾದ ನಂದಗೋಪನೂ ಈ ಪುಣ್ಯವನ್ನು ಪಡೆದುಬಂದಿರು ವರು. ಈಗಾಗಲೇ ಬಹಳ ಹೊತ್ತಾಯಿತು. ಕೊಡು ! ಕೊಡು !. ಬಾಲಕನನ್ನಿಲ್ಲಿಕೊಡು !!!

[ಎಂದು ವಸುದೇವನು ದೇವಕಿಯ ಕೈಯಿಂದ ಶಿಶುವನ್ನು ತೆಗೆ ದುಕೊಂಡು, ಸೆರೆಮನೆಯನ್ನು ಬಿಟ್ಟು ಹೊರಡುವಾಗ್ಗೆ ಬಾಗಿಲುಗಳೆ ಲ್ಲವೂ ತಾವಾಗಿಯೇ ತೆರೆದುಹೋಗುವುವು. ಕಾವಲುಗಾರರು ಗಾಢ ನಿದ್ರಾಪರವಶರಾಗಿರುವರು. ವಸುದೇವನು ನಿರಾತಂಕವಾಗಿ ಹೊರಡು ವನು.]

## ತೃತೀಯಾಂಕಂ—ತೃತೀಯರಂಗಂ

ಪ್ರದೇಶ:— ಯಮುನಾನದೀ ತೀರ.

[ನಾವಿಕರು ಹಡಗು ನಡಿಸುತ್ತ ಹಾಡುತ್ತಿರುವರು.]

ರಾಗ–ಶಂಕರಾಭರಣ–ಅಟ.

ಜೋರ್ಸೇ, ಬಾರ್ಸೇ, ಮಾರ್ಸೇ ॥ ಪ ॥
ಅಂಗಜನಯ್ಯನಪಾದದಿಪುಟ್ಟಿದ, ಗಂಗಮ್ಮತಾಯಿಗೇ ರಂಗುಪೂಮಾಲೆ ॥
ಜೋರ್ಸೇ ॥ ಅ–ಪ ॥

ಯಮುನಾತಾಯಿಗೆಬಿಳ್ಳೇಕಮಲಪುಷ್ಪದಮಾಲೆ,
ತಪತಿತಾಯಿಗೆಜಾಜಿಕುಸುಮಮಾಲೆ ॥ ಜೋರ್ಸೇ ॥
ಗೋದಾವರಿತಾಯಿಗೆಗೋರಂಟಿ ಹೂಮಾಲೆ,

ಕೃಷ್ಣವೇಣಿಗೆದುಂಡುಮಲ್ಲಿಗೆಮಾಲೆ ॥ ಜೋರ್ಸೆ ॥
ಕಾವೇರೀತಾಯಿಗೆಸೇವಂತಿಗೇಮಾಲೆ, ತುಂಗಭದ್ರೆಗೆ
ಸುರಹೊನ್ನೆಮಾಲೆ ॥ ಜೋರ್ಸೆ ॥

ಒಬ್ಬನಾವಿಕನು:—ಎಲವೋ ಮಣಿಭದ್ರಾ! ಬರಬರುತ್ತ, ಪ್ರವಾಹವು ಮಿತಿಮೀರುತ್ತಿದೆ. ನಾವು ಬೇಗನೆ ದಡವನ್ನು ಸೇರುವುದೊಳ್ಳೆಯದು. ಸಾವಕಾಶಮಾಡಿದರೆ “ನದೀನಾಂ ಸಾಗರೋಗತಿಃ” ಎಂಬಂತೆ ನಮ್ಮ ಗತಿ ಅಧೋಗತಿಯೇ ಆಗುವುದು.

ಮಣಿಭದ್ರ:—ಸಾರಮೇಯಾ! ನೀನು ಹೇಳಿದ್ದೇ ದಿಟವು. ಇಷ್ಟೊಂದು ಪ್ರವಾಹವು ಎಂದೂ ಬಂದಿಲ್ಲ. ಹಡಗನ್ನು ದಡಕ್ಕೆ ನಡಿಸು! ಇತ್ತ ನೋಡು ಹೊಸನೀರು ಬಲವಾಗಿ ತಳ್ಳುತ್ತಿರುವುದು.

ಹಡಗಿನವರೆಲ್ಲರೂ ಒಂದೇ ಧ್ವನಿಯಿಂದ:—ಜಾಗ್ರತೆ! ಜಾಗ್ರತೆ!

[ಎಂದು ನಾವಿಕರು ದಡವನ್ನು ಸೇರಿ ದಿಕ್ಕಾಪಾಲಾಗಿ ಹೊರಟು ಹೋಗುವರು.]

[ವಸುದೇವನು ಮಗುವನ್ನು ತಲೆಯಮೇಲಿರಿಸಿಕೊಂಡು ಯಮುನಾತೀರಕ್ಕೆ ಬಂದು ಸೇರುವನು.]

ವಸುದೇವ:—ಆಹಾ! ಪ್ರಚಂಡವೇಗದಿಂದ ಅಲ್ಲಕಲ್ಲೋಲವಾಗಿ ಪ್ರವಹಿಸುತ್ತ, ಭಯಂಕರವಾಗಿ ಬೋರ್ಗರೆಯುತ್ತಿರುವ ಈ ಮಹಾಪ್ರವಾಹವನ್ನು ದಾಟುವುದೆಂತು? ದಂಡೆಗಳನ್ನು ಮೀರಿ ಹರಿಯುತ್ತಿರುವ ಪ್ರವಾಹವೇಗದಮುಂದೆ ನನ್ನ ಸಾಹಸವು ಲೇಶವಾದರೂ ನಡಿಯುವಹಾಗಿಲ್ಲವು. ಮಾತೆಯಾದ ಯಮುನೆಯು, ನನ್ನಲ್ಲಿ ಕರುಣವಿಟ್ಟು ದಾರಿಯನ್ನು ಬಿಟ್ಟರಲ್ಲವೆ ನಾನು ಗೋಕುಲವನ್ನು ಸೇರುವುದು? ನನ್ನ ಪ್ರಾರ್ಥನೆಯನ್ನಂಗೀಕರಿಸಿ, ಯಮುನೆಯು ಕರುಣಿಸುವಳೆ? ಆಗಲಿ! ಪ್ರಾರ್ಥಿಸಿ ನೋಡುವೆನು.

ವಸುದೇವ:— ರಾಗ-ಯಮುನಾಕಲ್ಯಾಣಿ-ಏಕತಾಳ.

ಜಯಜಯನಿರ್ಮಲವಾಹಿನಿಯಮುನೇ,। ಜಾಹ್ನವಿಸೋದರಿ ಪಾಲಯಮಾಂ ॥ಪ॥ ಜಯಜಯ ಯಾದವ ದುಃಖನಿವಾರಿಣಿ, ದಿವ್ಯ ತರಂಗಿಣೀ ಪಾಲಯಮಾಂ ॥ ಜಯ ॥ ಅ-ಪ ॥ ಜಯಜಯಮಣಿಮಯಭೂಷಣ ಭೂಷಿಣಿ,

ವಾಂಚಿತದಾಯಿನಿ ವಿಶ್ವನುತೇ । ಮಂಜುಳಘೋಷಿಣಿ ಮಾಧವತೋಷಿಣಿ ದುರ್ಜನಗರ್ವವಿನಾಶಕೃತೇ ॥ಜಯ॥ ೧ ॥ ವರಶುಭಕಾಂಠಿ ಪರಿಜನಪಾಲಿನಿ ಪಾಪವಿದಾರಿಣಿ ಪದ್ಮಮುಖೀ । ಸುಜನವಿನೋದನಿ ಸೂನೃತರಂಜನಿ, ಪಾವನಿಶಿವರಾಮಾಭಿನುತೇ ॥ಜಯ॥ ೨ ॥

ಲೋಕಪಾವನಿಯಾದ ಯಮುನಾದೇವಿಯೆ! ನೀನು ಸರ್ವಜ್ಞಳು. ಎಲ್ಲವನ್ನೂ ಬಲ್ಲೆ. ದಯವಿಟ್ಟು ನನಗೆ ದಾರಿಯನ್ನು ಬಿಡು. ನಾನು ಗೋಕುಲಕ್ಕೆ ಹೋಗಿ ಪುನಃ ಈಗಲೇ ಹಿಂದಿರುಗಿಬರುವೆನು. ಜನನೀ! ಕಟಾಕ್ಷಿಸು.

(ಎಂದು ಪ್ರಾರ್ಥಿಸುವಾಗ್ಗೆ, ದೊಡ್ಡಶಬ್ದವಾಗುವುದು ಕೂಡಲೇ ಯಮುನೆಯು ಸಾಕಾರವಾಗಿ ಪ್ರಸನ್ನಳಾಗಿ ವಸುದೇವನನ್ನು ಗೌರವಿಸುವಳು.)

ಯಮುನೆ:—ಪುಣ್ಯಾತ್ಮನಾದ ವಸುದೇವನೆ! ನೀನು ಪರಮಭಾಗ್ಯಶಾಲಿಯು. ಜಗದೇಕ ಸಾರ್ವಭೌಮನಾದ ಭಗವಂತನೇ ನಿನಗೆ ಪುತ್ರನಾಗಿ ಅವತರಿಸಿರುವಲ್ಲಿ ನಿನ್ನಮಾತಿಗೆ ಪ್ರತಿಹೇಳತಕ್ಕವರಾರು? ಮತ್ತು ನಿನ್ನ ಪ್ರಯತ್ನವನ್ನು ವಿಘ್ನಪಡಿಸುವವರಾದರೂ ಯಾರು? ಇಗೋ ನಿನಗೆದಾರಿಬಿಡುವೆನು. ನೀನು ನಿರಾಯಾಸವಾಗಿ ಗೋಕುಲಕ್ಕೆ ಹೋಗಿಬರಬಹುದು. ನೀನು ಹಿಂದಿರುಗಿ ಬರುವವರೆಗೂ ಈ ದಾರಿಯು ಹೀಗೆಯೇ ಬಿಟ್ಟಿರುತ್ತದೆ. ವಸುದೇವ! ಭಯಪಡಬೇಡ. ಸುಖವಾಗಿ ಹೋಗಿಬಾ!

(ಎಂದು ಹೇಳುತ್ತ ಯಮುನೆಯು ಅದೃಶ್ಯಳಾಗುವಳು. ಪ್ರವಾಹವು ನಿಂತು ನದಿಯಲ್ಲಿ ದಾರಿ ಯೇರ್ಪಡುವುದು.

ವಸುದೇವ:—ಯಮುನಾದೇವಿಯು ನನ್ನಲ್ಲಿ ಅಪಾರ ಕಾರುಣ್ಯವುಳ್ಳವಳಾಗಿ, ತನ್ನ ಪ್ರವಾಹವನ್ನು ಸಹಾ ನಿಲ್ಲಿಸಿ ನನಗೆ ದಾರಿಯನ್ನು ಬಿಟ್ಟಿರುವಳು. ಈಕೆ ಮಾಡಿದ ಮಹೋಪಕಾರಕ್ಕೆ ನಾನೇನು ಪ್ರತ್ಯುಪಕಾರವನ್ನು ಮಾಡಲಿ? ಅಕಟ! ಬಂಧನದಲ್ಲಿ ಸಿಲುಕಿರುವ ನಾನೇನು ಮಾಡಬಲ್ಲೆನು, ಕೃತಜ್ಞತಾ ಸೂಚಕವಾಗಿ ವಂದನೆಗಳನ್ನು ಸಮರ್ಪಿಸಬಲ್ಲೆನಷ್ಟೆ! (ಎಂದು ವಸುದೇವನು ಯಮುನೆಗೆ ವಂದಿಸುತ್ತ ನದಿಯನ್ನುದಾಟಿ ಗೋಕುಲವನ್ನು ಕುರಿತು ತೆರಳುವನು.)

ವಸುದೇವ:—(ತನ್ನಲ್ಲಿ) ಇದೇನಾಶ್ಚರ್ಯವು ? ಭಯಂಕರವಾದ ಗುಡುಗು, ಸಿಡಿಲು, ಮಿಂಚುಗಳಿಂದೊಡಗೂಡಿದ ವರ್ಷವು ವಿಪರೀತ ವಾಗಿ ವರ್ಷಿಸಿದಾಗ್ಯೂ ಶಿಶುವಿನಮೇಲೆಯಾಗಲಿ, ನನ್ನ ಮೇಲೆಯಾ ಗಲಿ ಒಂದು ಹನಿಯಾದರೂ ಬೀಳಲಿಲ್ಲವಲ್ಲಾ !

(ಎಂದು ಸುತ್ತಮುತ್ತಲೂ ನೋಡತೊಡಗಿ, ಹಿಂದಕ್ಕೆ ನೋಡು ವಾಗ್ಗೆ ಸರ್ಪರಾಜನಾದ ಶೇಷನು ಕಾಣಿಸುವನು.)

ವಸುದೇವ:—(ಆಶ್ಚರ್ಯದಿಂದ) ಆಹಾ ! ಇದೇನು ವಿಚಿತ್ರವು ? ಫಣಿರಾಜನಾದ ಶೇಷನು ತನ್ನ ವಿಶಾಲವಾದ ಹೆಡೆಗಳನ್ನು ಬಿಚ್ಚಿ, ಶಿಶು ವಿನಮೇಲ್ಭಾಗದಲ್ಲಿ ಛತ್ರಿಯಂತೆ ಹರಡಿರುವನು. ಈತನೆಷ್ಟು ದೂರದಿಂ ದ ಹೀಗೆ ಬರುತ್ತಿರುವನೆಂಬುದನ್ನೇ ನಾನರಿಯೆನು. ಎಲ್ಲವೂ ಭಗವದಾ ಜ್ಞೆಯು.

ಶ್ಲೋ॥ ನಮೋನಂತಾಯ ಶೇಷಾಯ, ನಾಗಾಧೀಶಾಯತೇನಮಃ।
ಧರಾಧರಾಯಪೂರ್ಣಾಯ ವಿದ್ಯುತ್ತೇಜಾಯತೇನಮಃ ॥

(ಎಂದು ಶೇಷನನ್ನು ಸ್ತೋತ್ರಮಾಡುತ್ತಾ ತೆರಳುವನು.)

---

## ತೃತೀಯಾಂಕಂ—ಚತುರ್ಥ ರಂಗಂ.

### ಪ್ರದೇಶ:—ಗೋಕುಲ

(ನಂದಗೋಪನ ಪತ್ನಿಯಾದ ಯಶೋದಾದೇವಿಯು ಆಗತಾನೆ ಪ್ರಸವಿಸಿರುವಳು. ಯಶೋದೆಗೆ ಪುತ್ರಿಯಾಗಿ ಅವತರಿಸಿದ ಶಿಶುವು (ಯೋಗಮಾಯೆಯು) ದೇದೀಪ್ಯಮಾನವಾದ ತನ್ನ ತೇಜಸ್ಸಿನಿಂದ ಹೆರಿಗೆ ಯಮನೆಯನ್ನೆಲ್ಲಾ ಬೆಳಗುತ್ತಿರುವಳು. ಶಿಶುವಿನಕಾಂತಿಗೆ ಮರು ಳಾಗಿ ಯಶೋದೆಮುಂತಾದವರೆಲ್ಲರೂ ನಿದ್ರಾಪರವಶರಾಗಿರುವರು. ವಸು ದೇವನು ಮೆಲ್ಲನೆ ಪ್ರವೇಶಿಸಿ ಶಿಶುವನ್ನು ನೋಡುವನು.)

ವಸುದೇವ:—ಭಕ್ತವತ್ಸಲನಾದ ಭಗವಂತನು ಹೇಳಿದಂತೆ ನಂದ ಗೋಪನ ಪತ್ನಿಯಾದ ಯಶೋದೆಯ ಗರ್ಭದಲ್ಲಿ ಜನಿಸಿದ ಈ ಶಿಶುವು ಮನಮೋಹನಕರವಾಗಿ ರಾರಾಜಿಸುತ್ತಿರುವುದು. ಭಗವದಾಜ್ಞೆಯಂತೆ

ನನ್ನ ಮುದ್ದುಕೂಸನ್ನಿಲ್ಲಿಟ್ಟು, ಈ ಕೂಸನ್ನು ನಾನುತೆಗೆದುಕೊಂಡು ಹೋಗುವೆನು.

(ಎಂದು ನಿಶ್ಚಯಿಸಿ, ತನ್ನ ಶಿಶುವನ್ನಲ್ಲಿ ಮಲಗಿಸಿ, ಆಶಿಶುವನ್ನು ತಾನೆತ್ತಿಕೊಂಡು ಹಿಂದಿರುಗಿ ತೆರಳುವನು).

ಪ್ರದೇಶ:—ಮಧುರಾಪುರದ ಕಾರಾಗೃಹ.

ವಸುದೇವನು ಯೋಗಮಾಯಾ ಶಿಶುವನ್ನು ತಂದು ದೇವಕಿಯ ಮಗ್ಗಲಲ್ಲಿ ಮಲಗಿಸಿ ತಾನು ಕೈಗೆ ಸಂಕೋಲೆಗಳನ್ನು ಹಾಕಿಕೊಳ್ಳು ವನು. ಬಾಗಿಲುಗಳೆಲ್ಲವೂ ಯಥಾಪ್ರಕಾರ ಮುಚ್ಚಿಕೊಳ್ಳುವುವು. ಶಿಶುವು ಅಳುವುದಕ್ಕಾರಂಭಿಸುವುದು. ದೇವಕಿಯೂ ಎಚ್ಚೆತ್ತು ಮಗುವನ್ನು ಮುದ್ದಾಡುವಳು. ಮಗುವು ಮತ್ತಷ್ಟು ಗಟ್ಟಿಯಾಗಿ ಆರ್ಭಟಿಸು ವುದು. ನಿದ್ರಾಪರವಶರಾಗಿದ್ದ ಕಾವಲುಗಾರರು ಬೆಚ್ಚಿಬಿದ್ದೇಳುವರು. ದೇವಕಿಯು ಪ್ರಸವಿಸಿದಳೆಂದರಿತು, ಗಾಬರಿಯಿಂದ ಕಂಸನ ಬಳಿಗೆ ಓಡಿ ಹೋಗುವರು.

ಪ್ರದೇಶ:—ಕಂಸನ ಅರಮನೆಯ ಮುಂಭಾಗ.

ಹಂಸತೂಲಿಕಾ ತಲ್ಪದಮೇಲೆ ಮಲಗಿ ನಿದ್ರಿಸುತ್ತಿದ್ದ ಕಂಸನು, ತನ್ನನ್ನುಯಾರೋ ಹೊಡೆಯಲು ಬಂದಂತೆ ಕನಸುಕಂಡು, ನಿದ್ದೆಗಣ್ಣಿನಲ್ಲಿಯೇ। ಎದ್ದುಬಂದು ಬೀದಿಯಲ್ಲಿ ತಿರುಗಾಡುತ್ತ ಕಳವಳಿಸುತ್ತಿರು ವನು.

ಕಂಸ:—ಯಾರದು ? ಛೀ ಛೀ ! ಮೂರ್ಖರೇ। ನಿಮ್ಮಹೆಸ ರೇನು ? ನನ್ನನ್ನು ಹೊಡೆಯುವಿರಾ ? ಯಾರೆಂದರೇ ನಗುವಿರಲ್ಲಾ ! ಏನು ಎಹ್ಹೆಹ್ಹೆಹ್ಹೆಹ್ಹೆ ? ಸುಮ್ಮನೇ ಹಲ್ಲುಕಿಸಿದರೇ ಅರ್ಥವೇನು ? (ಎಂ ದು ಕಳವಳಿಸುತ್ತ ಮತ್ತಷ್ಟು ಗಟ್ಟಿಯಾಗಿ ) ಯಾರಲ್ಲಿ ? ನಾನು ಸಾಯಬೇಕೋ ? ಎಂಟನೇ ಗರ್ಭವೋ ? ನೀವೇಕೊಲ್ಲುವಿರೋ ? ಸಾಕು ಸಾಕು !

ಇಂತು ಹುಚ್ಚನಂತೆ ತನ್ನಷ್ಟಕ್ಕೆ ತಾನೇ ಪೇಚಾಡಿಕೊಳ್ಳುತ್ತ ಬೀದಿಯಲ್ಲಿ ಓಡಾಡುತ್ತಿದ್ದ ಕಂಸನನ್ನು, ಕಾರಾಗೃಹದಿಂದ ಬಂದ ಸೇವ ಕರು ನೋಡುವರು.

ಒಬ್ಬಸೇವಕ:—ಬೇಗಬೇಗನಡಿಯಿರೋ!

ಮತ್ತೊಬ್ಬಸೇವಕ:— ಕಂಸನನ್ನುನೋಡಿ ಗಾಬರಿಯಿಂದ ಮತ್ತೊಬ್ಬನನ್ನು ಕುರಿತು ಎಲಾ! ಸ್ವಲ್ಪ, ಥಾ, ಥಾ, ಥಾ, ತಾ ತಾ ತಾ ಳೋ! (ಎಂದು ಕಳವಳಿಸುವನು.)

ಮತ್ತೊಬ್ಬ:—(ಮತ್ತಷ್ಟುಗಾಬರಿಯಿಂದ) ಏ, ಏ, ಏ, ಏನದು? ಎಂದು ಮೇಲಕ್ಕೆ ಹಾರಿ ನೆಲಕ್ಕೆ ಬೀಳುವನು.

ವಿವೇಕವುಳ್ಳ ಮತ್ತೊಬ್ಬ:—ಈ ಮೂರ್ಖರೇಕೆ ಹೀಗೆ ಗಾಬರಿ ಪಡುತ್ತಿರುವರು? (ಸ್ವಲ್ಪಹೊತ್ತು ಯೋಚಿಸಿ ಸುತ್ತಲೂ ಪರಿಕಿಸಿ ಕಂಸನನ್ನುನೋಡಿ) ಸರಿಸರಿ! ಇದಕ್ಕಾಗಿಯೇ ಇವರಿಷ್ಟುಗಾಬರಿ ಪಡುವರು. ಕಂಸರಾಜೇಂದ್ರನು ಕನಸುಕಂಡು ಕಳವಳಿಸುತ್ತಿರುವಂತೆ ಕಾಣುತ್ತದೆ. ಆಗಲಿ! ನಾನು ಸ್ವಲ್ಪಹೊತ್ತು ಇಲ್ಲಿಯೇ ಕಾದಿದ್ದು ಈತನ ಕಳವಳವು ತೀರಿದ ನಂತರ ದೇವಕಮ್ಮನ ವಿಷಯವನ್ನು ವಿಜ್ಞಾಪಿಸುವೆನು.

(ಎಂದು ಸ್ವಲ್ಪ ಮರೆಯಾಗಿ ನಿಲ್ಲುವನು.)

ಕಂಸನು, ಸ್ವಲ್ಪ ಹೊತ್ತಿನಮೇಲೆ ಕಳವಳವು ನೀಗಲು ಆಕಳಿಸುತ್ತ ಎಚ್ಚತ್ತು ಸುತ್ತು ಮುತ್ತಲೂ ನೋಡಿ ಆಶ್ಚರ್ಯಚಕಿತನಾಗುವನು.



ಕಂಸ:— ಆಹ! ಇದೇನಾಶ್ಚರ್ಯವು? ಅಂತಃಪುರದಲ್ಲಿ ಹಂಸತೂಲಿಕಾತಲ್ಪದಮೇಲೆ ಮಲಗಿ ನಿದ್ರಿಸುತ್ತಿದ್ದ ನಾನು ಇಲ್ಲಿಗೆಬರಲು ಕಾರಣವೇನು? ನನ್ನನ್ನು ಇಲ್ಲಿಗೆ ತಂದವರು ಯಾರು? ಇದೆಂತಹ ಮಟುಮಾಯವು? (ಎಂದು ಸ್ವಲ್ಪಯೋಚಿಸಿ) ಪಿಶಾಚಗಳಂತೆ ಅತ್ಯಂತ ವಿಕಾರಸ್ವರೂಪಿಗಳಾದ ನಾಲ್ಕುರುಮಂದಿಯು ನನ್ನನ್ನು ಅಟ್ಟಿಕೊಂಡು ಬಂದರಲ್ಲಾ! ಅವರು ಯಾರಾಗಿರಬಹುದು? ಅವರೀಗ ಎಲ್ಲಿಗೆಹೋದರು? ಎಂದು ಪುನಃ ಯೋಚಿಸಿ) ಓಹೋ! ತಿಳಿಯಿತು. ತಿಳಿಯಿತು. ಇದೆಲ್ಲವೂ ಕನಸಿನ ಕಳವಳವು ಇಂತಹ ಕೆಟ್ಟಕನಸುಂಟಾಗಲು ಕಾರಣವೇನು?

(ಎಂದು ವಿತರ್ಕಿಸುತ್ತ ಇಲ್ಲಿಂದಲ್ಲಿಗೆ ಸುಳಿದಾಡುತ್ತಿರಲು ಕಾವಲುಗಾರನು ಕಾಣಿಸಿಕೊಳ್ಳುವನು.)

ಕಾವಲುಗಾರ:— ಅಖಂಡರಾಜ್ಯಲಕ್ಷ್ಮೀಧುರಂಧರ ! ವೀರವಿಕ್ರಮ! ಶತ್ರುಜನ ಗರ್ಭನಿರ್ಭೇದನ! ಜಯ ಜಯ ಕಂಸರಾಜೇಂದ್ರಾ! ಪರಾಕು !! ಪರಾಕು!!!

ಕಂಸ:—ಚಾರನೇ-ಸಮಾಚಾರವೇನು ?

ಚಾರ:—ದೇವಕಮ್ಮನವರು ಪ್ರಸವಿಸಿರುವರು.

ಕಂಸ:—(ಬಹಳ ಗಾಬರಿಯಿಂದ)

ರಾಗ—ಸುರಟಿ—ಏಕತಾಳ.

ಬರುವೆ ಬರುವೆ ಬರುವೆ, ದುರುಳಶಿಶು। ವನುಪಿಡಿದೆಸೆವೆನು ಗಗನತಲಕೆ ಭಲ ॥ಪ॥ ಪರಿಪರಿವಿಧದೊಳು ಮನಕೆಖತಿಯಕೊಡು । ತಿರುವಪಸುಳೆಯನು ಬಿಡದೆಕಡಿವೆನಹ ॥ ಬರುವೆ॥ ಅ-ಪ ॥

ಆಹಾ! ಯಾವಸಂಶಯದಿಂದ ನಾನು ಇಷ್ಟು ದಿವಸಗಳಿಂದಲೂ ಕಷ್ಟಪಡುತ್ತಿದ್ದೆನೋ, ಆ ದೌರ್ಭಾಗ್ಯ ಶಿಶುವನ್ನು ಪಿಡಿದುಹಿಂಡಿ ಗಗನಮಾರ್ಗಕ್ಕೆ ಹಾರಿಸುವೆನು. ಅತ್ಯಲ್ಪ ಜೀವಿಯಾದ ಶಿಶುವಂದರೇನು ? ಅದು ನನ್ನನ್ನು ಕೊಲ್ಲುವುದೆಂದರೇನು? (ಎಂದು ಮೇಲಕ್ಕೆನೋಡಿ) ಎಲೌ ಗಗನವಾಣಿಯೇ! ನೀನು ಯಾವಶಿಶುವಿನಿಂದ ನನಗೆ ಪ್ರಾಣಭೀತಿಯುಂಟಾಗುವುದೆಂದು ಹೇಳಿದೆಯೋ ಆದೌರ್ಭಾಗ್ಯಶಿಶುವನ್ನು ಈಗಲೇ ಪಿಡಿದು ಅಂಬರಕ್ಕೆ ಹಾರಿಸುವೆನು. ಆಶಿಶುವೇ ನನ್ನನ್ನು ಕೊಲ್ಲುವುದೋ, ಅಥವಾ ಆಶಿಶುವನ್ನೇ ನಾನು ಕೊಲ್ಲುವೆನೋ, ಈಗ ನೀನೇ ನೋಡುವೆ! ಇದುಬರಿಯಮಾತಲ್ಲ. ಜಗದೇಕ ಶೂರನಾದ ಕಂಸಭೂಪಾಲನು ಕೋಪಿಸಿದನಾದರೇ ಹದಿನಾಲ್ಕು ಲೋಕಗಳೂ ಅಲ್ಲಕಲ್ಲೋಲವಾಗುವಲ್ಲಿ, ಯಃಕಶ್ಚಿತ್ ಶಿಶುವೇನು ಮಾಡಬಲ್ಲದು ? ಆಗಲಿ! ಅದನ್ನೂ ನೋಡಿಯೇಬಿಡುವೆನು.

(ಎಂದು ತೀವ್ರಕೋಪೋದ್ದೀಪಿತನಾಗಿ, ತತ್ತರವಡುತ್ತ, ತಕ್ಷಣವೇ ಅಲ್ಲಿಂದ ಹೊರಟು ಕಾರಾಗೃಹಕ್ಕೆ ಪೋಗಿ ದೇವಕಿಯ ಮಡಲಿನಲ್ಲಿದ್ದ ಪಸುಳೆಯನ್ನು ಬಲಾತ್ಕಾರವಾಗಿ ಸೆಳೆದು ತನ್ನ ಕೈಯ್ಯಲ್ಲಿ ಪಿಡಿದು ಥಳಥಳಿಸುವ ಕತ್ತಿಯನ್ನು ಒರೆಯಿಂದೀಚೆಗೆಳೆದು ಝಳಿಪಿಸುತ್ತ, ಶಿಶುವನ್ನು ಕಡಿಯಲಾರಂಭಿಸುವನು.

ದೇವಕಿ:—(ಭಯ ಕಂಪಿತಳಾಗಿ ಕಂಸನನ್ನು ತಡೆದು ಪ್ರಾರ್ಥಿಸುವಳು.)

ರಾಗ—ಕಮಾಚ್ ಅಥವಾ ಸುರಟಿ—ಆದಿ.

ಬಿಡುಬಿಡುಕೋಪವನು, ಅಣ್ಣಯ್ಯ ನಿನ್ನ । ಅಡಿಗಳಿಗೆರಗುವೆನು ॥ಪ॥ ಪಿಡಿದುಪಸುಳೆಯನು ಕಡುಕಾತುರದಿಂ । ದಡಿಗಡಿಗೀಪರಿದುಡುಕುವುದೇನಿದು ॥ ಬಿಡು ॥ಅ-ಪ॥ ಅಳಿಯನಲ್ಲವಣ್ಣ । ನಿನಗೆಮುದ್ದು ಸೊಸೆಇದು ಸ್ವಾಮಿ ಸಣ್ಣ । ಗಗನವಾಣಿನುಡಿ ಸಟೆಯಾಯಿತುಕೇಳ್, ಮಿಗೆಸುಖವನು ನೀಂ ಪಡೆಯುವೆನಿಜವಿದು ॥ ಬಿಡು ॥

ಅಣ್ಣಾ! ಕ್ಷಣಮಾತ್ರ ಸೈರಿಸು! ಈ ಪಸುಳೆಯನ್ನೇತಕ್ಕೆ ಕೊಲ್ಲುವೆ? ಇದು ಗಂಡುಮಗುವಲ್ಲ. ಹೆಣ್ಣು! ನನ್ನ ಗರ್ಭದಲ್ಲಿ ಜನಿಸುವ ಗಂಡುಮಗುವಿನಿಂದ ನಿನಗೆ ಹಾನಿಯುಂಟಾಗುವುದೆಂದಲ್ಲವೇ ಅಶರೀರವಾಣಿಯು ನುಡಿದುದು! ಆಮಾತು ಸುಳ್ಳಾಯಿತು. ಈ ಶಿಶುವು ನಿನಗಳಿಯನಲ್ಲ—ಸೊಸೆಯು. ನಾನು ನಿನ್ನತಂಗಿಯಲ್ಲವೆ? ನನ್ನ ಮಾತನ್ನು ಲಾಲಿಸು. ಅಣ್ಣಾ! ಹೆಣ್ಣನ್ನು ಕೊಲ್ಲುವುದು ರಾಜಧರ್ಮವಲ್ಲ. ರಾಜಾಧಿರಾಜರಾದ ನಳ-ಹರಿಶ್ಚಂದ್ರ-ಮಾಂಧಾತಾದಿ ಮಹೀಪಾಲಕರು ನಡೆದ ರೀತಿಯಲ್ಲಿ ನಡೆ! ಪ್ರಪಂಚವೆಲ್ಲವೂ ನಿನ್ನನ್ನು ಹೊಗಳುವಂತೆ ಪ್ರವರ್ತಿಸು. ಮಹಾತ್ಮರ ಪದ್ಧತಿಯನ್ನನುಸರಿಸು. ಅದರಿಂದ ನಿನ್ನ ಕೀರ್ತಿಯು ನಿಷ್ಕಳಂಕವಾಗಿ ಶೋಭಿಸುವುದು. ನಾನು ನಿನ್ನ ಒಡಹುಟ್ಟಿದವಳಲ್ಲವೆ? ಮನೆಯ ಹೆಣ್ಣುಮಗಳು ಕಣ್ಣೀರುಹಾಕಿದರೆ ಅದು ಕುಲನಾಶನಕ್ಕೆ ಕಾರಣವಾಗುವುದಲ್ಲವೆ! ಇದು ನಿನಗೆ ತಿಳಿಯದ ವಿಷಯವಲ್ಲವು. ನನ್ನನ್ನು ರಕ್ಷಿಸುವ ಭಾರವು ನಿನ್ನದಲ್ಲವೆ? ಅನುಜಳನ್ನು ಅಗ್ರಜನೇ ಹಿಂಸಿಸತೊಡಗಿದರೆ ಅದನ್ನು ಪರಿಹರಿಸುವರಾರು? ಅಣ್ಣಾ! ಸುಮಂಗಲಿಯೂ, ಆರ್ತಳೂ, ಪುತ್ರಶೋಕಭೀತಳೂ, ನಿನ್ನ ಶರಣುಹೊಕ್ಕಿರುವವಳೂ ಆದ ನನ್ನನ್ನು ಸಂಕಟಪಡಿಸಬೇಡ. ಶರಣಾಗತರನ್ನು ಕಾಡಿಸುವುದು ಧರ್ಮವಲ್ಲ. ಅಣ್ಣಾ! ಅಬಲೆಯಾದ ನನ್ನನ್ನು ಕಾಡಿಸುವುದು ಧರ್ಮವಲ್ಲ. ಅಣ್ಣಾ! ನಿನ್ನ ತಂಗಿಯಾದ ನನ್ನನ್ನು ರಕ್ಷಿಸು! ರಕ್ಷಿಸು!!

(ಎಂದು ಕಣ್ಣೀರು ಸುರಿಸುತ್ತ ದೇವಕಿಯು ಕಂಸನ ಪಾದಗಳ ಮೇಲೆ ಬಿದ್ದು ಬೇಡುವಳು.)

ಕಂಸಃ—(ದೇವಕಿಯನ್ನು ಒದ್ದು ತಳ್ಳುತ) ದೌರ್ಭಾಗ್ಯಳೆ! ನಿನ್ನ ದೆಸೆಯಿಂದಲ್ಲವೆ ನನಗಿಷ್ಟೊಂದು ಮನಸ್ಸಂಕಟವು? ಪವಿತ್ರವಾದ

ಭೋಜಕುಲಕ್ಕೆ ನೀನು ಮೃತ್ಯುದೇವತೆಯಾಗಿ ಜನಿಸಿರುವೆ. ಚೀ ಚೀ! ಮೂರ್ಖಳೆ! ದೂರಸಾರು, ಇಲ್ಲವಾದರೆ ನನ್ನೀ ಖಡ್ಗಧಾರೆಗೆ ನೀನೂ ತುತ್ತಾಗುವೆ. (ಎಂದು ತಂಗಿಯನ್ನು ನೀಚವಾಗಿ ಬೈಯ್ಯುತ ದೂರಕ್ಕೆತಳ್ಳಿ ಆಕೆಯ ಎದುರಿನಲ್ಲಿಯೇ ಆ ಶಿಶುವಿನ ಕಾಲುಗಳನ್ನು ಪಿಡಿದು ಮೇಲಕ್ಕೆಸೆದು, ಕತ್ತಿಯನ್ನು ಬೀಸುವನು).

ದೇವಕಿ:— (ಕೈಗಳನ್ನು ಮೇಲಕ್ಕೆತ್ತಿ) ಹಾ! ಹಾ! ದೈವವೇ! ಇನ್ನೇನುಗತಿ!

(ಎಲ್ಲರೂ ಮೇಲಕ್ಕೆ ದೃಷ್ಟಿಯಿಟ್ಟು ನೋಡುತ್ತಿರುವರು-)



(ಯೋಗಮಾಯಾ ಸಂದರ್ಶನ.)

ಕಂಸನಿಂದ ಹಾರಿಸಲ್ಪಟ್ಟ ಶಿಶುವು ಸೋಲಕ್ಕೆಬೀಳದೆ, ಗಗನಮಂಡಲದಲ್ಲಿ ನಿಂತು ನೂತನವಿಕಸಿತವಾದ ಪುಷ್ಪಮಾಲೆಗಳಿಂದಲೂ, ಕೆಂಬಣ್ಣದ ಸೀರೆಯಿಂದಲೂ, ಸುಗಂಧಪರಿಮಳಗಳಿಂದಲೂ, ರತ್ನಖಚಿತವಾದ ಆಭರಣಗಳಿಂದಲೂ, ತನ್ನ ಎಂಟು ಕೈಗಳಲ್ಲಿಯೂ ಧರಿಸಿದ ಗದಾ-ಶಂಖ-ಚಕ್ರ-ಖಡ್ಗ-ಬಾಣ-ಬಿಲ್ಲು-ಡಮರುಕ-ಶೂಲಮುಂತಾದ ಆಯುಧಗಳಿಂದಲೂ ಶೋಭಿಸುತ್ತ, ಸಿದ್ಧಚಾರಣ ಗಂಧರ್ವಾದಿಗಳು ಸಮರ್ಪಿಸುವ ಕರ್ಪೂರದಾರತಿಗಳನ್ನು ಸ್ವೀಕರಿಸುತ್ತ, ಕಂಸನನ್ನು ಕುರಿತು ಧಿಕ್ಕರಿಸಿ ಮಾತನಾಡುವಳು.

ಯೋಗಮಾಯೆ:—ಎಲವೋ ದುರಾತ್ಮನಾದ ಕಂಸನೆ! ಒಡಹುಟ್ಟಿದ ತಂಗಿಎಂದೆಣಿಸದೆ ಮದೋನ್ಮತ್ತನಾಗಿ ಹಾರಿಬೀಳುತ್ತಿರುವೆ. ದೇವಕಿಯ ಗರ್ಭದಲ್ಲಿ ಹುಟ್ಟಿದ ಆರುಮಂದಿ ಪಸುಕಂದರನ್ನೂ ಕೊಂದೆ. ಅಷ್ಟಕ್ಕಾದರೂ ಸುಮ್ಮನಿರದೆ ನನ್ನ ಕಾಲುಗಳನ್ನು ಹಿಡಿದು ಮೇಲಕ್ಕೆಸೆದೆ. ಚೀ ಚೀ ಪಾಪಿ! ಮದಾಂಧಾ! ಹುಟ್ಟಿದ ಮಕ್ಕಳನ್ನೊಂದು ಕ್ಷಣವಾದರೂ ಇರಗೊಡಿಸದೆ, ಕೊಲೆಪಾತಕನಾದ ಕಟುಕನಂತೆ ಸಂಹರಿಸುತ್ತಿರುವೆಯಲ್ಲಾ! ಎಳೆಮಕ್ಕಳನ್ನು ಕೊಲ್ಲುವುದೊಂದು ಶೂರತ್ವವೆ? ಎಲವೋ ದುರ್ಮತಿ! ನಿನ್ನನ್ನು ಸಂಹರಿಸಿ ಲೋಕಕ್ಕೆ ಕುಶಲವನ್ನುಂಟುಮಾಡತಕ್ಕ ಮಹಾತ್ಮನು ಬೇರೊಂದುಕಡೆ ಅವತರಿಸಿರುವನೆಂದು ತಿಳಿ. ಆತನು ನಿನ್ನಗರ್ವವನ್ನು ಮುರಿದು ನಿನ್ನನ್ನು ಯಮನ ಬಳಿಗೆ ಕಳುಹಿಸುವನು. ಆ ನಿನ್ನ ಅವಸಾನಕಾಲದಲ್ಲಿ ನಾನು ಮೃತ್ಯುದೇವತಾರೂಪದಿಂದಬಂದು ನಿನ್ನರಕ್ತವನ್ನು ಹೀರುವೆನು. ದೈವದ್ರೋಹಿ! ನಿನ್ನ ವಿನಾಶಕಾಲವು ಸನಿಹಾಪಿಸುತ್ತಿದೆ. ಮೆರೆಯದಿರು! ಮೆರೆಯದಿರು!

(ಎಂದು ಕಂಸನನ್ನು ಜರೆದಾಡುತ ಯೋಗಮಾಯೆಯು ಅದೃಶ್ಯಳಾಗುವಳು.)

ಕಂಸನು ಭಯಭ್ರಾಂತಚಿತ್ತನಾಗಿ ಗಡಗಡನಡುಗುತ, ತನ್ನ ದುಷ್ಕಾರ್ಯಕ್ಕೆ ಪಶ್ಚಾತ್ತಾಪಪಡುತ, ದೇವಕೀ ವಸುದೇವರ ಪಾದಗಳಿಗೆರಗಿ ಕ್ಷಮಾಪಣೆ ಬೇಡುವನು.

ಕಂಸ:—ತಂಗೀ ದೇವಕಿ! ಭಾವಾ ವಸುದೇವ! ನಾನು ಮಾಡಿದ ಮಹಾಪರಾಧಗಳನ್ನು ಕ್ಷಮಿಸಿರಿ. ಸನ್ಮಾರ್ಗವನ್ನು ತೊರೆದು,

ಹೇಳಿಕೆಮಾತುಗಳನ್ನು ಕೇಳಿ ಕುಪಿತನಾಗಿ ನಿಮ್ಮ ಮಕ್ಕಳನ್ನೆಲ್ಲಾ ಕೊಂದೆನು. ನಿರ್ದೋಷಿಗಳಾದ ಹಸುಮಕ್ಕಳನ್ನು ಕೊಂದು ಶಿಶುಹತ್ಯಾದೋಷಕ್ಕೆ ಗುರಿಯಾದೆನು. ಅಶರೀರವಾಣಿಯ ಮಾತುಗಳನ್ನು ನಿಜವೆಂದುನಂಬಿ ನಾನಿಷ್ಟು ದುಷ್ಕಾರ್ಯಗಳನ್ನಾಚರಿಸಿದೆನು. ಅಮ್ಮಯ್ಯಾ ದೇವಕಿ! ಮಹಾತ್ಮಾ ವಸುದೇವ! ನನ್ನಿಂದ ನಿಮಗುಂಟಾದ ಕಷ್ಟನಷ್ಟಗಳನ್ನೆಲ್ಲಾ ಮರೆತುಬಿಡಿರಿ. ನನ್ನನ್ನು ಮನ್ನಿಸಿರಿ. ಲೇಶವಾದರೂ ಮನಸ್ಸಿನಲ್ಲಿಡಬೇಡಿರಿ. ದಯಾಮಯರಾಗಿ ನನ್ನನ್ನು ಸಲಹಿರಿ. (ಎಂದು ಬೆಸಗೊಳ್ಳುತ್ತ ಕಂಸನು ದೇವಕೀವಸುದೇವರ ಚರಣಗಳಿಗೆರಗುವನು.)

ವಸುದೇವ:—ಭಾವಾ ಕಂಸರಾಜೇಂದ್ರಾ! ಪ್ರಪಂಚದಲ್ಲಿ ಜೀವಕೋಟಿಗಳು ಮಾಯೆಯಿಂದಾವರಿಸಲ್ಪಟ್ಟು ದ್ವೇಷಬುದ್ಧಿಗಳಾಗಿ, ಲೋಭ, ಕಾರ್ಪಣ್ಯ, ಅಹಂಕಾರ, ಗರ್ವ, ಭಯ, ಶತ್ರುತ್ವ, ಕಾಮ, ಕ್ರೋಧಮುಂತಾದ ಪ್ರಮೋದ ವಿಷಾದಗಳನ್ನು ಹೊಂದುತ್ತಲೂ, ಒಬ್ಬರನ್ನೊಬ್ಬರು ಹೀಯಾಳಿಸುತ್ತಲೂ, ದ್ವೇಷಿಸುತ್ತಲೂ, ಕೊಲ್ಲುತ್ತಲೂ, ತಮ್ಮ ಪ್ರತಾಪವನ್ನು ತೋರಿಸುತ್ತ, ಕಡೆಗೆ ತಾವೇ ನಾಶವಾಗುತ್ತಾರೆ. ಪ್ರತಿಯೊಬ್ಬರಿಗೂ ಅವರವರ ಕರ್ಮಾನುಸಾರವಾಗಿ ಫಲಾಫಲಗಳುಂಟಾಗುತ್ತವೆ. ಒಬ್ಬರು ಮತ್ತೊಬ್ಬರನ್ನು ಕೆಡಿಸಬೇಕೆಂದು ವೃಥಾಪ್ರಯಾಸಪಟ್ಟು ಕಡೆಗೆ ತಾವು ಕೆಡುವುದೇ ಹೊರತು ಮತ್ತಾವಪ್ರಯೋಜನವನ್ನೂ ಹೊಂದಲಾರರು. ಭಗವಂತನಲ್ಲಿ ದೃಷ್ಟಿಯಿಟ್ಟು ಸಾಧುಮಾರ್ಗದಲ್ಲಿ ಸಂಚರಿಸದಿರುವ ನೀಚಮಾನವರು ಎಷ್ಟುಕಾಲ ಜೀವಿಸಿದ್ದರೂ ಫಲವಿಲ್ಲವು. ಕಂಸಭೂಪಾಲಾ! ನೀನೇಕೆ ಚಿಂತಿಸುವೆ? ನಮ್ಮ ಕರ್ಮವನ್ನು ನಾವನುಭವಿಸುವೆವು. "ತೇನವಿನಾ ತೃಣಮಪಿನಚಲತಿ" ಎಂಬಂತೆ ಭಗವದಾಜ್ಞೆಯ ಹೊರತು ಯಾವ ಕಾರ್ಯವೂ ಆಗುವುದಿಲ್ಲವು. ನಿನ್ನಲ್ಲಿ ನಮಗೆ ಲೇಶವಾದರೂ ದ್ವೇಷವಿಲ್ಲವು. ನೀನಿನ್ನು ನಿಶ್ಚಿಂತನಾಗಿರು.

ದೇವಕಿ:—ಅಣ್ಣಾ! ನಿನ್ನ ದೈನ್ಯಭಾವವು ಬಹಳ ಶೋಚನೀಯವಾಗಿದೆ. "ಗತಂನಶೋಚಯೇತ್ಪ್ರಾಜ್ಞಃ" ಎಂಬ ಆರ್ಯೋಕ್ತಿಯಂತೆ, ಕಳೆದುಹೋದ ವಿಷಯಗಳಿಗಾಗಿ ದುಃಖಿಸುವುದು ಪ್ರಾಜ್ಞರ ಲಕ್ಷಣವಲ್ಲ. ಏನೇನು ಆಗಬೇಕೆಂದು ವಿಧಿವಿಲಾಸವಿದ್ದಿತೋ ಅದೆಲ್ಲವೂ ಆಯಿತು.

ನಮ್ಮ ಕರ್ಮಫಲವನ್ನು ನಾವನುಭವಿಸಿದೆವು ನೀನೇಕೆ ದುಃಖಿಸುವೆ? ಗತಿಸಿದ ಕಾರ್ಯಕ್ಕೆ ಪಶ್ಚಾತ್ತಾಪವೇ ಪ್ರಾಯಶ್ಚಿತ್ತವು. ಮಾಡತಕ್ಕು ದೇನು? ದೈವವಿಲಾಸವನ್ನು ಮೀರತಕ್ಕವರಾರು? ಇನ್ನಾದರೂ ಸನ್ಮಾರ್ಗದಲ್ಲಿ ಕಾಲಕಳೆಯುತ್ತ ಭಗವದನುಗ್ರಹಕ್ಕೆ ಪಾತ್ರನಾಗು!

[ಕಂಸನು ದೀನ ಮುಖದಿಂದ ತೆರಳುವನು. ಎಲ್ಲರೂ ನಿಷ್ಕ್ರಮಿಸುವರು.]

ಪ್ರದೇಶ:—ಗೋಕುಲ.

"ಯಮುನಾ ತೀರದಲ್ಲಿ" ಬೃಂದಾವನಪೂಜೆಯೆಂಬ ಉತ್ಸವವನ್ನು ನಡಿಸುತ್ತ, ಗೋಪ-ಗೋಪಿಯರೊಂದಿಗೆ ನಂದಗೋಪನು ವಿನೋದಮಗ್ನನಾಗಿರುವನು.

ಶ್ಲೋಕ॥

ಯನ್ಮೂಲೇಸರ್ವತೀರ್ಥಾನಿ, ಯನ್ಮಧ್ಯೇ ಸರ್ವದೇವತಾಃ। ಯದಗ್ರೇಸರ್ವವೇದಾಶ್ಚ ತುಲಸೀಂ ತಾಂ ನಮಾಮ್ಯಹಂ॥



ತಾತ್ಪರ್ಯ॥

ಯಾವ ಮೂಲದಲ್ಲಿಸಮಸ್ತ ತೀರ್ಥಗಳೂ, ಮಧ್ಯದಲ್ಲಿ ಸಮಸ್ತ ದೇವತೆಗಳೂ, ಅಗ್ರದಲ್ಲಿ ಸಮಸ್ತ ವೇದಗಳೂ ಪ್ರಸನ್ನವಾಗಿರುವುವೋ ಅಂತಹ ತುಲಸಿಗೆ ನಮಸ್ಕಾರವು!

ಗೋಪಸುಂದರಿಯರು :— ರಾಗ-ಮಧ್ಯಮಾವತಿ-ಏಕತಾಳ.

ಬೃಂದಾವನವಾಸಿನಿಶ್ರೀತುಲಸೀ । ನಾರಾಯಣನರಸೀ ॥ ಪ ॥
ಸುಂದರಾಂಗಿನವನವವಿಲಾಸಿನೀ। ಮಂದರಧರಗೋವಿಂದವಿನೋದಿನಿ॥ಅ-ಪ॥
ನಿತ್ಯವು ಪೂಜಿಪ ಭಕ್ತರಮನೆಯಲಿ । ನಿತ್ಯೋನ್ನತ ಸೌಭಾಗ್ಯಂಗಳನು ।
ಅತ್ಯಾನಂದದಿನೆಲೆಗೊಳಿಸುವಸರ್ವೋತ್ತಮ ಶುಭಮಂಗಳವರದಾಯಿನಿ ॥
ಬೃಂದಾ ॥
ದೇವಮೌನಿವರಸನ್ನುತಚರಿತೇ । ಭಾನಜತಾತ ವಿಲೋಲರಸಯುತೇ ।
ದೇವಿ ನಿರತಶಿವರಾಮಸೇವಿತೇ ಭಾವನೀಯಕರುಣಾರಸಭರಿತೇ ॥ಬೃಂದಾ॥

ನಂದ:—ಎಲೈ, ಬಂಧುಜನರೆ! ಬೃಂದಾವನದ ಸುತ್ತಲೂ, ಹಸರು ತೋರಣಗಳನ್ನು ಕಟ್ಟಿರಿ. ಮಾಧವನ ಪೂಜೆಗೆ ಬೇಕಾದ ಸಾಮಗ್ರಿಗಳನ್ನು ಸಿದ್ಧಪಡಿಸಿರಿ. ನಮ್ಮ ಕುಲಗುರುಗಳಾದ ಗರ್ಗಾಚಾರ್ಯರನ್ನು ಕುಟುಂಬ ಸಮೇತರಾಗಿ ಬರಮಾಡಿರಿ.

ಗೋಪರು :—ಒಡೆಯಾ! ತಮ್ಮಪ್ಪಣೆಯಂತೆ ಎಲ್ಲವನ್ನೂ ಸಿದ್ದಪಡಿಸುವೆವು.

[ಎಂದು ಕೆಲವು ಮಂದಿ ಗೋಪರು ನಿಷ್ಕ್ರಮಿಸುವರು. ಸ್ವಲ್ಪ ಹೊತ್ತಿನಮೇಲೆ ಗರ್ಗಾಚಾರ್ಯರು ತಮ್ಮ ಪತ್ನಿಯಾದ ಸುಮಿತ್ರಾದೇವಿಯೊಂದಿಗೆ ಪ್ರವೇಶಿಸುವರು.]

[ನಂದನು ಆಚಾರ್ಯದಂಪತಿಗಳಿಗೆ ವಂದಿಸುವನು.]

ನಂದ :—ಆಚಾರ್ಯರಿಗೆ ವಂದಿಸುವೆನು.

ಗರ್ಗಾಚಾರ್ಯ :—ನಂದಗೋಪನೆ ! ಆಯುಷ್ಮಂತನಾಗು !

[ತದನಂತರ ಸುಮಿತ್ರಾದೇವಿಗೆ ವಂದಿಸುವನು.]

ಸುಮಿತ್ರೆ :—ಪುಣ್ಯಾತ್ಮನೆ! ನಿನಗೆ ಮಂಗಳವಾಗಲಿ.

ನಂದ :—ಪೂಜ್ಯರೇ ! ಈ ಪೀಠಗಳನ್ನಲಂಕರಿಸಿರಿ.

ಗರ್ಗಾಚಾರ್ಯ:—ಆಗಬಹುದು.

[ದಂಪತಿಗಳು ಸುಖಾಸೀನರಾಗುವರು.]

## ನಾರದರ ಪ್ರವೇಶ.

ನಾರದ :— ರಾಗ-ಹಿಂದೂಸ್ಥಾನಿಕಾಪಿ- ಏಕತಾಳ

ನಾರಾಯಣಂಭಜರೇ! ಹೇಮಾನಸ ॥ ಪ ॥
ವಾರಿಧಿಶಯನಮಪಾರಸಾರಶುಭಕಾರಣಮಸುರವಿದಾರಣನಿರತಂ ॥ಅ-ಪ॥
ಆದಿಮೂಲಮಖಿಲಾಗಮಸನ್ನುತ । ವೇದವಿಹಿತಪರಬೋಧವಿನೋದಂ ॥
ನಾರಾ ॥
ಸುಂದರಾಂಗಮರವಿಂದನಯನಮಾನಂದನಿಲಯಗೋವಿಂದಮಮೇಯಂ॥
ನಾರಾ ॥
ದೇವನುತಂಶಿವರಾಮಪೋಷಕಂ। ಶ್ರೀವನಿತಾಮಣಿಚಿತ್ತವಿಲಾಸಂ ॥ನಾರಾ॥

ನಾರದರನ್ನು ಕಾಣುತ್ತಲೇ ನಂದಗೋಪನಾದಿಯಾಗಿ ಎಲ್ಲರೂ ನಮಸ್ಕರಿಸುವರು.

ನಾರದ :—ಸುಖೀಭವ! ಸುಖೀಭವ!

ನಂದ :—ಪರಮ ತಪೋಧನರಾದ ನಾರದಮುನಿವರ್ಯರೇ! ತಮ್ಮ ಸಂದರ್ಶನದಿಂದ ನಾವೆಲ್ಲರೂ ಪವಿತ್ರರಾದೆವು. ಈ ಪೀಠವನ್ನಲಂಕರಿಸೋಣವಾಗಲಿ!

ನಾರದರು ಪೀಠದಲ್ಲಿ ಕುಳಿತುಕೊಳ್ಳುವರು.

ಗರ್ಗಾಚಾರ್ಯ :-ನಾರಾಯಣಧ್ಯಾನಪರಾಯಣರಾದ ನಾರದರಿಗೆ ವಂದಿಸುವೆನು.

ನಾರದ :—ನಮೋನಮಃ.

ಸುಮಿತ್ರೆ :—ಮುನಿಕುಲೋತ್ತಮರಿಗೆ ವಂದಿಸುವೆನು .

ನಾರದ :—ಸಾಧ್ವೀಮಣಿಯೆ! ನಿನಗೆ ಮಂಗಳವಾಗಲಿ.

ನಂದ :—ಪೂಜ್ಯರೆ! ಕೇವಲ ಪ್ರಾಪಂಚಿಕವಾದ ಭೋಗಭಾಗ್ಯಗಳಲ್ಲಿ ತಮಗೆ ಲೇಶವಾದರೂ ಅಪೇಕ್ಷೆಯಿಲ್ಲವಾದಾಗ್ಯೂ, ಭವಸಾಗರದಲ್ಲಿ ಮಗ್ನರಾಗಿರುವ ಪ್ರಾಣಿಕೋಟಿಗಳನ್ನುದ್ಧರಿಸಲೆಳಸಿ ಪರೋಪಕಾರಾರ್ಥವಾಗಿ ತ್ರಿಲೋಕಗಳಲ್ಲಿಯೂ ಸರ್ವದಾ ಸಂಚರಿಸುತ್ತ, ದುಷ್ಟಶಿಕ್ಷಣ, ಶಿಷ್ಟರಕ್ಷಣಗಳೆಂಬ ಮಹತ್ಕಾರ್ಯಗಳನ್ನು ನಡಿಸುವ ಪರಮಪುಣ್ಯಾತ್ಮರಾಗಿರುವಿರಿ. ತಮ್ಮ ಮಹಿಮೆಯನ್ನು ಬಣ್ಣಿಸಲು ಸಾವಿರ ನಾಲಿಗೆಗಳುಳ್ಳ ಶೇಷನಿಗೂ ಸಾಧ್ಯವಾಗಲಾರದು. ನಮ್ಮ ಪುಣ್ಯೋ

ದಯವಿಂದ ತಾವಿಲ್ಲಿಗೆ ಪಯಮಾಡಿಸಿದಿರಿ. ತಮ್ಮ ಪಾದಧೂಳಿಯಿಂದ ನಮ್ಮೀ ಗೋಕುಲವೆಲ್ಲವೂ ಪವಿತ್ರವಾಯಿತು.

[ಎಂದು ಸ್ತೋತ್ರಮಾಡುತ್ತ ನಂದನು ಪುನಃ ವಂದಿಸುವನು.]

ನಾರದ :—ಎಲೈ, ನಂದಗೋಪನೆ! ನನ್ನ ವಿಚಾರವು ಹಾಗಿರಲಿ! ಬ್ರಹ್ಮೇಂದ್ರಾದಿ ದೇವತೆಗಳಿಗೆ ಸಹಾ ಅಲಭ್ಯವಾದ ಮಹಾಭಾಗ್ಯವು ನಿನಗೆ ಸುಲಭವಾಗಿ ಲಭಿಸಿರುವುದು. ನೀನು ಎಂತಹ ಪುಣ್ಯಶಾಲಿ ಯೆಂಬ ರಹಸ್ಯವನ್ನು ನಾನು ಬಲ್ಲೆನು. ಮತ್ತು ನಿಮ್ಮ ಕುಲಗುರುಗಳಾದ ಈ ಗರ್ಗಾಚಾರ್ಯರು ಬಲ್ಲರು.

ನಂದ :—ಪೂಜ್ಯರೆ! ಎಲ್ಲವೂ ತಮ್ಮಾಶೀರ್ವಾದ ಬಲವು.

ನಾರದ :—ಪುಣ್ಯಾತ್ಮನೆ! ನಿನ್ನ ಮನೆಯಲ್ಲವತರಿಸಿರುವ ಯಶೋದಾದೇವಿಯ ಮುದ್ದುಬಾಲಕನಿಗೆ ಶ್ರೀಕೃಷ್ಣನೆಂತಲೂ ವಸುದೇವನ ಪತ್ನಿಯಾದ ರೋಹಿಣೀದೇವಿಯ ಪುತ್ರನಿಗೆ ರಾಮನೆಂತಲೂ, ಭಗವದಾಜ್ಞಾನುಸಾರವಾಗಿ ನಾಮಕರಣಮಾಡಿರುವೆನು. ಉಳಿದ ಪದ್ಧತಿಗಳನ್ನೆಲ್ಲಾ ಈ ಗಾರ್ಗಾಚಾರ್ಯರು ನಡಿಸುವರು. ನಾನು ಮತ್ತೊಂದು ವೇಳೆ ಬರುವೆನು. ಆಗ್ಗೆ ನಿನಗೆ ಕೆಲವು ರಹಸ್ಯಗಳನ್ನು ತಿಳಿಸುವೆನು.

ನಂದ :—ಮಹಾತ್ಮರೆ! ತಮ್ಮಾಜ್ಞೆಯನ್ನು ಶಿರಸಾವಹಿಸುವೆನು.

ನಾರದ :—ಎಲ್ಲರಿಗೂ ವಂದನೆಗಳು. ನಾನಿನ್ನು ತೆರಳುವೆನು.

[ನಾರದರು ಮಥುರಾಪುರವನ್ನು ಕುರಿತು ತೆರಳುವರು. ನಂದಗೋಪನು ಪರಿವಾರದೊಂದಿಗೆ ಪಟ್ಟಣಕ್ಕೆ ತೆರಳುವನು.]

---

## ತೃತಿಯಾಂಕಂ:—ಪಂಚಮರಂಗಂ.

ಪ್ರದೇಶ :—ಮಥುರಾಪುರ.

ಕಂಸನ ದರ್ಬಾರ್.

ಕಂಸನು ಸಿಂಹಾಸನದಮೇಲೆ ಕುಳಿತು ಚಿಂತಾಕ್ರಾಂತನಾಗಿರುವನು. ಅಘಾಸುರ-ಬಕಾಸುರ-ಧೇನುಕಾಸುರ, ವತ್ಸಾಸುರ, ಪ್ರಲಂಬಾಸುರ, ಚಾಣೂರ ಮುಂತಾದವರು ಸುತ್ತಲೂ ಕುಳಿತಿರುವರು.

ಮಂತ್ರಿಗಳು:—ಪ್ರಭುವೇ! ತಾವಿಷ್ಟು ದೀನಮುಖದಿಂದ ಯೋಚಿಸುತ್ತಿರಲು ಕಾರಣವೇನು ?

ಕಂಸ:—ಮಿತ್ರರೇ! ನನ್ನ ದುಃಖವನ್ನು ಏನೆಂದು ಹೇಳಲಿ? ನನ್ನನ್ನು ಸಂಹರಿಸುವುದಕ್ಕಾಗಿ ವಿಷ್ಣುವು ಅವತರಿಸಿರುವನಂತೆ. ಅವನು ಎಲ್ಲಿರುವನೆಂಬುದು ಪರಿಷ್ಕಾರವಾಗಿ ತಿಳಿಯಲಿಲ್ಲ. ಅವನನ್ನು ಕಂಪು ಹಿಡಿಯುವುದಕ್ಕೆ ಉಪಾಯವೇನು? ಈ ವ್ಯಸನವು ಹಗಲೂ ರಾತ್ರಿಯೂ ನನ್ನನ್ನು ಪೀಡಿಸುತ್ತಿರುವುದು. ಶತೃಶೇಷವಿರುವವರೆಗೂ ಕಣ್ಣಿಗೆ ನಿದ್ರೆ ಹಿಡಿಯುವುದೆ? ಮಿತ್ರರೇ! ನೀವೇ ಯೋಚಿಸಿನೋಡಿರಿ.

ಅಘಾಸುರ :—ಎಲೈ ಕಂಸಭೂಪಾಲಾ! ಈ ಸ್ವಲ್ಪಕಾರ್ಯಕ್ಕಾಗಿ ನೀನಿಷ್ಟು ಚಿಂತಿಸಬೇಕೆ? ನಮ್ಮ ಶತ್ರುಗಳಾದ ದೇವತೆಗಳಿಗೆ ವಿಷ್ಣುವು ಸಹಾಯಕನಾಗಿರುವನು. ಆ ವಿಷ್ಣುವಿಗೆ ದೇವತೆಗಳಲ್ಲಿ ಬಹಳ ಪ್ರೀತಿಯಿರುವುದು. ಅವನು ಯಾವಾಗಲೂ ದೇವತಾಪಕ್ಷಪಾತಿಯು. ಆದುದರಿಂದ ನಾವು ಸರ್ವಪ್ರಯತ್ನದಿಂದಲೂ, ವಿಷ್ಣುವಿಗೆ ದೇವತೆಗಳಲ್ಲಿ ದ್ವೇಷವುಂಟಾಗುವಂತೆ ಮಾಡಬೇಕು.

ಬಕಾಸುರ :—ಎಲೈ ಕಂಸರಾಜೇಂದ್ರಾ! ಆ ಕ್ರೂರರಾದ ದೇವತೆಗಳಿಗೆ ಸಹಾಯ ಮಾಡತಕ್ಕವನು ವಿಷ್ಣುವೊಬ್ಬನೇ ಅಲ್ಲ! ಮತ್ತೆ ಬೇಕಾದಷ್ಟುಮಂದಿ ಇರುವರು.

ಧೇನುಕಾಸುರ :—ಎಲೈ, ಬಕಾಸುರನೆ! ಭಂಡರಾದ ಆ ದೇವತೆಗಳ ಹೆಸರು ಕೇಳುತ್ತಲೇ ನನ್ನ ಶರೀರದಲ್ಲಿ ಕ್ರೋಧಾಗ್ನಿಯು ಪ್ರಜ್ವಲಿಸುತ್ತಿರುವುದು. ಆ ದುರಾತ್ಮರಾದ ದೇವತೆಗಳಿಗೆ ವಿಷ್ಣುವಲ್ಲದೆ ಮತ್ತಾರು ಸಹಾಯಮಾಡುತ್ತಿರುವರೋ? ಅವರ ಹೆಸರುಗಳನ್ನು ತಿಳಿಸು. ಅಂತಹ ದುರಾತ್ಮರನ್ನು ಈ ಕ್ಷಣದಲ್ಲಿಯೇ ಧ್ವಂಸಮಾಡುವೆನು.

ಅಘಾಸುರ :— ಮಿತ್ರರೇ ನನ್ನ ಮಾತನ್ನು ಕೇಳಿರಿ! ಆ ನಮ್ಮ ವೈರಿಗಳಾದ ದೇವತೆಗಳಿಗೆ ಸಹಾಯ ಮಾಡತಕ್ಕವನು ವಿಷ್ಣುವೆಂಬುದನ್ನು ನೀವೆಲ್ಲರೂ ಬಲ್ಲಿರಷ್ಟೆ! ಗ್ರಾಮಗಳಲ್ಲಿಯೂ ಪಟ್ಟಣಗಳಲ್ಲಿಯೂ, ಅರಣ್ಯಗಳಲ್ಲಿಯೂ ವಾಸಮಾಡತಕ್ಕ ಋಷಿಮುನಿಗಳೆಲ್ಲರೂ ದೇವತಾಪಕ್ಷಪಾತಿಗಳಾಗಿಯೇ ಇರುವರು. ಯಜ್ಞ-ಯಾಗ-ಜಪ-

ತಪ-ಮುಂತಾದ ಕ್ರಿಯಾಕಲಾಪಗಳನ್ನೆಲ್ಲಾ ದೇವತೆಗಳ ಪ್ರೀತಿಗಾಗಿಯೇ ಮಾಡುತ್ತಿರುವರು. ಪುಣ್ಯ ಕ್ಷೇತ್ರಗಳಲ್ಲಿಯೂ, ಪುಣ್ಯತೀರ್ಥಗಳಲ್ಲಿಯೂ ವಾಸಮಾಡತಕ್ಕವರೂ, ಪಾತಿವ್ರತ್ಯದಿಂದ ಕೊಬ್ಬಿದ ಸ್ತ್ರೀಯರೂ, ಜ್ಞಾನದಿಂದ ಕೊಬ್ಬಿದ ಬ್ರಹ್ಮವೇತ್ತರೆಂಬ ಜೋಗಿಗಳೂ, ಸರ್ವದಾ ದೇವತಾಪಕ್ಷಪಾತಿಗಳಾಗಿರುವರು ಗೋವುಗಳಲ್ಲಿ ದೇವತೆಗಳು ವಾಸಮಾಡುವರೆಂಬ ನಂಬಿಕೆಯಿಂದ ಜನರೆಲ್ಲರೂ ಗೋಕ್ಷೀರವನ್ನೂ, ಗೋಘೃತವನ್ನೂ ದೇವತೆಗಳಿಗೆ ನೈವೇದ್ಯವಾಗಿ ಸಮರ್ಪಿಸುವರು. ಇದನ್ನೆಲ್ಲಾ ಯೋಚಿಸಿ ನೋಡಿದರೆ ದೇವತೆಗಳ ಅಭಿವೃದ್ಧಿಗೆ, ಗೋವುಗಳು-ಋಷಿಮುನಿಗಳು, ಪತಿವ್ರತಾ ಸ್ತ್ರೀಯರು-ಸಾಧುಗಳು ಮುಂತಾದವರು ಪ್ರಬಲಕಾರಣರಾಗಿರುವರು. ಆದುದರಿಂದ ನಾವುಗಳೆಲ್ಲರೂ ಏಕಾಭಿಪ್ರಾಯವುಳ್ಳವರಾಗಿ, ಅಹೋರಾತ್ರಿಗಳಲ್ಲಿಯೂ ಎಡಬಿಡದೆ ಪ್ರಯತ್ನಿಸುತ್ತ ದೇವತೆಗಳನ್ನೂ, ದೇವತಾಪಕ್ಷಪಾತಿಗಳಾದ ಪ್ರತಿಯೊಬ್ಬರನ್ನೂ ಹುಡುಕಿ ಹುಡುಕಿ ಧ್ವಂಸಮಾಡಬೇಕು. ಆಗ ನಾವು ನಿರ್ಭೀತರಾಗಿ ನಮ್ಮ ಪ್ರತಾಪವನ್ನು ಸಲ್ಲಿಸಬಹುದು.

ಕಂಸ:—(ದೊಡ್ಡ ಧ್ವನಿಯಿಂದ) ಭಳಿರೇ ಅಘಾಸುರ! ಚನ್ನಾಗಿ ವ್ಯಕ್ತಪಡಿಸಿದೆ. ನೀನು ಹೇಳಿದ ಪ್ರತಿಯೊಂದಕ್ಷರವೂ ದಿಟವಾದುದು।

ಅಸುರರೆಲ್ಲರೂ:—(ಒಂದೇ ಧ್ವನಿಯಿಂದ) ಎಲೈ ಪ್ರಭುವೇ! ಕಂಸಮಹೀಪಾಲಾ! ಕೊಡು! ಅಪ್ಪಣೆಯನ್ನು ಕೊಡು! ಈಕ್ಷಣದಲ್ಲಿಯೇ ನಮ್ಮ ವೈರಿಗಳಾದ ದೇವತೆಗಳನ್ನು ಧ್ವಂಸ ಮಾಡುವೆವು.

ಕಂಸ:—ದೇವತೆಗಳನ್ನು ಧ್ವಂಸ ಮಾಡುವುದೊಂದೇಅಲ್ಲ.

ಅಸುರರು:—ಮತ್ತೇನು ಮಾಡಬೇಕೋ ಅಪ್ಪಣೆಯಾಗಲಿ!

ಕಂಸ:—ಶ್ಲೋ॥ ಯತಸ್ಸಾಧ್ವೀತತೋಲಕ್ಷ್ಮೀಃ। ಯತೋಲಕ್ಷ್ಮೀಸ್ತತೋಹರಿಃ
ಯತೋವಿಷ್ಣುಸ್ತತೋಧರ್ಮಃ। ಯತೋಧರ್ಮಸ್ತತೋಜಯಃ॥

ಎಲ್ಲಿ ಪತಿವ್ರತಾ ಸ್ತ್ರೀಯರಿರುವರೋ ಅಲ್ಲಿ ಲಕ್ಷ್ಮಿ ವಾಸ ಮಾಡುವಳು. ಎಲ್ಲಿ ಲಕ್ಷ್ಮಿ ವಾಸಮಾಡುವಳೋ ಅಲ್ಲಿ ವಿಷ್ಣುವು ಪ್ರಸನ್ನನಾಗಿರುವನು. ಎಲ್ಲಿ ವಿಷ್ಣುವು ಪ್ರಸನ್ನನಾಗಿರುವನೋ ಅಲ್ಲಿ ಧರ್ಮವು

ನೆಲೆಗೊಳ್ಳುವುದು. ಎಲ್ಲಿ ಧರ್ಮವು ನೆಲೆಗೊಳ್ಳುವುದೋ ಅಲ್ಲಿ "ಜಯ" ಉಂಟಾಗುವುದು. ಆದುದರಿಂದ ಎಲ್ಲಕ್ಕೂ ಕಾರಣಭೂತರಾದ, ಪತಿವ್ರತಾ ಸ್ತ್ರೀಯರುಗನ್ನು ಮೊಟ್ಟಮೊದಲು ಭಂಗಪಡಿಸಬೇಕು.

ಅಸುರರು:—(ಭುಜಗಳನ್ನು ತಟ್ಟುತ) ಸಿದ್ಧ! ಸಿದ್ಧ!! ಸಿದ್ಧ!!!

ಕಂಸ:—ಇದು ಮೊದಲನೆಯ ಕಾರ್ಯವು.

ಅಸುರರು:—(ಆರ್ಭಟದಿಂದ) ಪ್ರಭುವೇ! ಎರಡನೆಯ ಕಾರ್ಯವಾವುದೋ ಬೇಗನೆ ಅಪ್ಪಣೆಯಾಗಲಿ.

ಅಘಾಸುರ:—ಅದನ್ನು ನಾನು ಹೇಳುವೆನು.

ಅಸುರರು:—ಆಗಬಹುದು.

**ಅಘಾಸುರ:—**

ಶ್ಲೋ॥ ಗೋಭಿರ್ವಿಪ್ರೈಶ್ಚ ವೇದೈಶ್ಚ । ಸತೀಭಿಸ್ಸತ್ಯವಾದಿಭಿಃ । ದಾತೃಭಿರ್ಧರ್ಮಶೀಲೈಶ್ಚ । ಸಪ್ತಭಿರ್ಧಾರ್ಯತೇಮಹೀ ॥

ಗೋವುಗಳು-ಬ್ರಾಹ್ಮಣರು-ವೇದಗಳು-ಪತಿವ್ರತೆಯರು-ಸತ್ಯವಂತರು-ದಾನಶೀಲರು-ಧರ್ಮಾತ್ಮರು, ಎಂಬೀ ಏಳುಬಗೆಯ ಜನರಿಂದ ಪ್ರಪಂಚವು ನಡಿಸಲ್ಪಡುತ್ತದೆ. ಆದುದರಿಂದ ನಾವೆಲ್ಲರೂ ಒಂದೇಮನಸ್ಸಿನಿಂದ ಪ್ರಯತ್ನಿಸಿ, ಗೋಬ್ರಾಹ್ಮಣರನ್ನೂ, ವೇದಗಳನ್ನೂ, ಪತಿವ್ರತಾ ಸ್ತ್ರೀಯರನ್ನೂ, ಸತ್ಯಸಂಧರನ್ನೂ, ದಾನಧರ್ಮನಿರತರನ್ನೂ, ಧ್ವಂಸ ಮಾಡಬೇಕು. ಹಾಗೆ ಮಾಡಿದೆವಾದರೆ, ಆಗ ವಿಷ್ಣುವು ನಮ್ಮ ಪರಾಕ್ರಮಕ್ಕೆ ಭ್ರಾಂತನಾಗುತ್ತಾನೆ. ತದನಂತರ ನಾವು ನಿರ್ಭೀತರಾಗಿ ದೇವತೆಗಳನ್ನು ಜಯಿಸಿ, ಅಮರಾವತಿಯಿಂದ ಒದ್ದೋಡಿಸಬಹುದು.

ಕಂಸ:—ಬೇಷ್! ಬೇಷ್!! ಚೆನ್ನಾಗಿ ಹೇಳಿದೆ!!!

ಅಸುರರು:—ಈಗ ನಾವು ಮಾಡಬೇಕಾದ ಕೆಲಸಗಳನ್ನು ಮತ್ತೊಂದುಸಾರಿ ವಿವರವಾಗಿ ತಿಳಿಸಿರಿ.

ಕಂಸ:—ದೇವತೆಗಳನ್ನೂ, ಅವರ ಪಕ್ಷದ ಪ್ರತಿಯೊಬ್ಬರನ್ನೂ ಎಲ್ಲಿ ನೋಡಿದರೆ ಅಲ್ಲಿಯೇ ಹಿಡಿದು ಸಂಹರಿಸುವುದು.

ಅಸುರರು:—(ಆರ್ಭಟದಿಂದ) ಒಂದು!

ಕಂಸ:—ಋಷಿ ಮುನಿಗಳ ಯಜ್ಞಯಾಗಗಳನ್ನು ಧ್ವಂಸಮಾಡಿ ಅವರನ್ನು ಹಿಡಿದು ಅಗ್ನಿಗುಂಡಗಳಲ್ಲಿ ಹಾಕುವುದು.

ಅಸುರರು:—ಎರಡು!

ಕಂಸ:—ಗೋವುಗಳನ್ನು ಕೊಂದು ಭಕ್ಷಿಸುವುದು.

ಅಸುರರು:—ಮೂರು!

ಕಂಸ:—ಎಲ್ಲಿ ವೇದಾಧ್ಯಯನ ನಡೆಯುವುದೋ ಅಲ್ಲಿಗೆ ನುಗ್ಗಿ ಅಲ್ಲಿರತಕ್ಕವರನ್ನೆಲ್ಲಾ ಹಿಡಿದು ಚಪ್ಪರಿಸುವುದು.

ಅಸುರರು:—ನಾಲ್ಕು!

ಕಂಸ:-ಪತಿವ್ರತಾ ಸ್ತ್ರೀಯರನ್ನು ಹಿಡಿದು ಭಂಗಪಡಿಸುವುದು.

ಅಸುರರು:—ಭಾಪು! ಭಾಪು! ಐದು!

ಕಂಸ:—ಯಾವ ಮನೆಯಲ್ಲಿ ಹರಿಕಥಾ ಕಾಲಕ್ಷೇಪವು ನಡೆಯುವುದೋ ಆ ಮನೆಯನ್ನು ಗೋಡೆಗಳ ಸಹಿತ ನೆಲಕ್ಕೆ ಕೆಡಹುವುದು.

ಅಸುರರು:—ಆರು!

ಕಂಸ:—ಈ ಆರು ಕಾರ್ಯಗಳನ್ನೂ ನಿರ್ದಾಕ್ಷಿಣ್ಯವಾಗಿ ನಡಿಸಬೇಕು.

ಅಸುರರು:—ಇಷ್ಟೇನೋ?

ಕಂಸ:—ಅಷ್ಟೇ ಇಲ್ಲ. ಮತ್ತೊಂದು ಮುಖ್ಯವಾದವಿಷಯವಿದೆ.

ಅಸುರರು:—ಅದೇನದೇನು?

ಕಂಸ:—ನನ್ನನ್ನು ಕೊಲ್ಲತಕ್ಕ ಬಾಲಕನು ಎಲ್ಲಿಯೋ ಬೆಳೆಯುತ್ತಿರುವನೆಂದು ಕೇಳಿದೆವಲ್ಲವೆ?

ಅಸುರರು:—ಅಹುದು!

ಕಂಸ:—ಆ ಸಂಕಟವನ್ನು ಪರಿಹಾರ ಮಾಡಿಕೊಳ್ಳಬೇಕಲ್ಲವೆ?

ಅಸುರರು:—ಹೇಗೆ ಮಹಾಪ್ರಭೂ!

ಕಂಸ:—ನೀವೆಲ್ಲರೂ ಸರ್ವ ಪ್ರಯತ್ನದಿಂದಲೂ, ಕಟ್ಟಿದ ಮನೆಯನ್ನು ಬಿಡದೇ ಹುಡುಕಿ, ಸಣ್ಣ ಸಣ್ಣ ಬಾಲಕರನ್ನೂ, ಎಳೆ ಮಕ್ಕನ್ನೂ ಕಂಡಕೂಡಲೇ ಧ್ವಂಸಮಾಡಬೇಕು.

ಅಸುರರು:—ನಿರಾಯಾಸವಾಗಿ ಮಾಡುವೆವು.

ಕಂಸ:—ಎಳೆ ಮಕ್ಕಳನ್ನು ನೋಡುತ್ತಲೇ ಎಂಥವರಿಗಾದರೂ ಕರುಣ ಉಂಟಾಗುವುದು ಸಹಜವು!

ಅಸುರರು:—ಕರುಣವೆಂಬುವುದು ನಮ್ಮ ಪಾಲಿಗೆ ಘೋರಶತ್ರುವಲ್ಲವೆ ಮಹಾಪ್ರಭೂ!

ಕಂಸ:—ಹಾಗಲ್ಲ! ಎಳೆ ಮಕ್ಕಳ ಮುಖಭಾವಗಳು ನೋಡುವುದಕ್ಕೆ ಎಷ್ಟೇ ಲಕ್ಷಣವಾಗಿದ್ದಾಗ್ಯೂ ನೀವು ಮಾತ್ರ ಬೆರಗಾಗಬಾರದು!

ಅಸುರರು:—ರಾಕ್ಷಸರಾದ ನಮಗೆ ಲಕ್ಷಣವೇನು? ಅವಲಕ್ಷಣವೇನು? ಎಲ್ಲಾ ಒಂದೇ.

ಅಘಾಸುರ:—ಆ ಅಲಂಕಾರ ಭಾವಗಳೆಲ್ಲವೂ ಖೂಳರಾದ ದೇವತೆಗಳಿಗೇ ಹೊರತು ನಮಗಲ್ಲವು.

[ನಾರದರು ಪ್ರವೇಶಿಸುವರು. ಎಲ್ಲರೂ ಎದ್ದುನಿಂತು ವಂದಿಸುವರು.]

ನಾರದ:—ನಿಜ! ನಿಜ! ನಿಮ್ಮನ್ನು ಸೃಷ್ಟಿಮಾಡುವಾಗ ಬ್ರಹ್ಮನು ಅಲಂಕಾರ ಭಾವಗಳನ್ನು ಲಕ್ಷ್ಯವಿಡದೆಯೇ ತೋಚಿದಹಾಗೆಲ್ಲಾ ಮಾಡಿರುವನೆಂದು ಕಾಣುತ್ತದೆ.

ಅಸುರರು:—ಅದು ಹೇಗೆ?

ನಾರದ:—ಹೇಗೆಂದರೆ, ಒಂದು ಶರೀರಕ್ಕೆ ಎರಡುತಲೆಗಳು, ಮೂರು ಮೂಗುಗಳು, ಏಳ ಕಿವಿಗಳು, ಒಂಬತ್ತು ಕಣ್ಣುಗಳು, ನಾಲ್ಕು ಮೊಳದುದ್ದ ಕೋರೆ ಹಲ್ಲುಗಳು, ವಿಶಾಲವಾದ ಹೊಟ್ಟೆಗಳು, ಆನೆಯ ಕಾಲುಗಳು ಹತ್ತು ಮೊಳದ ಇಪ್ಪತ್ತು ಮೊಳದ ಸೊಂಟಗಳು, ಮುಂತಾದ ಈ ಸ್ವರೂಪಗಳನ್ನೆಲ್ಲಾ ಇಷ್ಟು ಧಾರಾಳವಾಗಿ ರಾಕ್ಷಸರಾದ ನಿಮಗೆ ಕೊಟ್ಟನೇ ಹೊರತು ಬ್ರಹ್ಮನು ಮತ್ತಾರಿಗೂ ಕೊಡಲಿಲ್ಲವು.

ಅಸುರರು:-ಭಳಿರೇ! ನಾರದರೇ! ನಮಗೆ ಮಾತ್ರವೇ ಅಂಗಾಂಗಳನ್ನು ಇಷ್ಟು ಧಾರಾಳವಾಗಿ ಕೊಡಲು ಕಾರಣವೇನು?

ನಾರದ:—ನೀವು ಧೀರ ಶೂರ ಶಿಖಾಮಣಿಗಳಾದ ಅಸುರಕುಲದವರಾದುದರಿಂದ, ನೀವು ಲಕ್ಷಣಶಾಸ್ತ್ರವನ್ನು ಲಕ್ಷ್ಯಮಾಡತಕ್ಕವರಲ್ಲವೆಂದ

ರಿತು ಈ ನಿಮ್ಮ ಮನೋಹರ ರೂಪಗಳನ್ನು ನಿಮಗಾಗಿಯೇ ಪ್ರತ್ಯೇಕ ವಾಗಿ ರಚಿಸಿರುತ್ತಾನೆ. ಮಿಕ್ಕವರಿಗೆಲ್ಲಾ, ಮೈಯ್ಯಿಗೆ ತಕ್ಕ ಕೈಗಳು, ಕೈಗಳಿಗೆ ತಕ್ಕ ಕಾಲುಗಳು, ಕಾಲುಗಳಿಗೆ ತಕ್ಕ ಪಾದಗಳು, ಪಾದಗಳಿಗೆ ತಕ್ಕ ಬೆರಳುಗಳು, ತಲೆಗೆ ತಕ್ಕ ಮುಖ, ಮುಖಕ್ಕೆ ತಕ್ಕ ಕಣ್ಣುಗಳು, ಅದರಂತೆಯೇ ಕೆನ್ನೆಗಳು, ಮೂಗುಗಳು, ಈತೆರನಾಗಿ ಒಂದಕ್ಕೆ ತಕ್ಕಂತೆ ಮತ್ತೊಂದನ್ನು ಸ್ವಲ್ಪಸ್ವಲ್ಪವಾಗಿಯೇ ರಚಿಸುತ್ತಾನೆ!

ಅಸುರರು:—ನಮಗೋ ?

ನಾರದ:—ನಿಮಗೆ ಹಾಗಲ್ಲ. ಮುಖವು ಒಂದು ಮೊಳದಗಲವಿದ್ದರೆ ಮೂಗು ಮೂರು ಮೊಳದುದ್ದ. ಮೂಗು ಮೂರು ಮೊಳದುದ್ದವಾದರೆ ಕಿವಿಗಳು ನಾಲ್ಕು ಮೊಳದಗಲ. ಕಿವಿಗಳು ನಾಲ್ಕು ಮೊಳದಗಲವಾದರೆ ಕೈಗಳು ಹದಿನಾಲ್ಕು ಮೊಳದುದ್ದ. ಕೈಗಳು ಹದಿನಾಲ್ಕು ಮೊಳದುದ್ದವಾದರೆ ಹೊಟ್ಟೆ ನಲವತ್ತುಮೊಳದ ಸುತ್ತಳತೆ. ಈವಿಧವಾಗಿ ಅಂಗಾಂಗಗಳನ್ನು ನಿಮಗೆ ಬಹು ಧಾರಾಳವಾಗಿ ರಚಿಸಿರುತ್ತಾನೆ. ಆದುದರಿಂದ ನಿಮ್ಮ ರೂಪರೇಖಾವಿಲಾಸಗಳೇ ಒಂದುವಿಧ, ದೇವತೆಗಳಿಗೇ ಒಂದು ವಿಧ. ನಿಮ್ಮ ಕಣ್ಣುಗಳು ಯಾವಾಗಲೂ ಉರಿಯುವ ಬೆಂಕಿಯ ಕೆಂಡಗಳಂತೆಯೂ, ಶರೀರವು ತೊಳೆದ ಬೆಂಕಿಯಕೆಂಡಗಳಂತೆ ಶುಭ್ರವಾಗಿಯೂ ಇರುತ್ತವೆ. ದೇವತೆಗಳಿಗೆ ಈ ಭಾಗ್ಯವೆಲ್ಲಿಂದ ಬಂದೀತು ?

ಅಸುರರು:—ಭೇಷ್! ನಾರದರೇ! ಭೇಷ್!

ನಾರದ:—ಕಂಸನೇ! ನಾನಿನ್ನು ತೆರಳುವೆನು. ಹಿಂದೆ ನಾನು ತಿಳಿಸಿದ ವಿಷಯಗಳೆಲ್ಲವೂ ಜ್ಞಾಪಕವಿರಬಹುದಷ್ಟೆ! ಬಹಳ ಜಾಗರೂಕತೆಯುಳ್ಳವನಾಗಿರು. ಎಚ್ಚರಿಕೆ!

ಕಂಸ:—ನಾರದರೇ! ತಮ್ಮ ಹಿತೋಪದೇಶವನ್ನು ಚನ್ನಾಗಿ ಪಾಠ ಮಾಡಿರುವೆನು. ಮರೆತಿರಲಿಲ್ಲ.

ನಾರದ:—ನಾನಿನ್ನು ತೆರಳುವೆನು.

ಕಂಸ:—ನಮಸ್ಕಾರ!

[ನಾರದರು ನಿಷ್ಕ್ರಮಿಸುವರು.]

ಕಂಸ:—ಮಿತ್ರರೆ! ಇನ್ನು ನಮ್ಮ ಮಂತ್ರಾಲೋಚನೆಯನ್ನು ಪೂರ್ತಿಗೊಳಿಸಿ, ಕಾರ್ಯ ಕರಣಗಳನ್ನು ನಿಶ್ಚಯಿಸೋಣ.

ಅಸುರರು:—ಚಿತ್ತಾನುಸಾರವಾಗಬಹುದು.

ಕಂಸ:—ನೀವೆಲ್ಲರೂ ಅತಿ ಜಾಗ್ರತೆಯಿಂದ ಗ್ರಾಮಗಳಲ್ಲಿಯೂ, ಪಟ್ಟಣಗಳಲ್ಲಿಯೂ, ಅರಣ್ಯಗಳಲ್ಲಿಯೂ, ಆಶ್ರಮಗಳಲ್ಲಿಯೂ ಹುಡುಕಿ ಮೂಲೆ ಮೂಲೆಗೂ ಒಬ್ಬೊಬ್ಬರಾಗಿ ಪರಿವಾರದೊಂದಿಗೆ ಹೊರಟು, ಪ್ರತಿಯೊಂದು ಸ್ಥಳವನ್ನೂ ಚೆನ್ನಾಗಿ ಪರಿಶೋಧಿಸಿ, ಹಸುಮಕ್ಕಳನ್ನೆಲ್ಲಾ ಹಿಡಿದು ಸಂಹರಿಸಿ ಬರಬೇಕು. ತಿಳಿಯಿತೋ ?

ಅಸುರರು:—(ಗಟ್ಟಿಯಾಗಿ) ತಿಳಿಯಿತು ಮಹಾಪ್ರಭೂ !

ಎಂದು ಕಂಸನು ಅಸುರರಿಗೆ ಆಜ್ಞಾಪಿಸುವಾಗ್ಗೆ ಪೂತನೆಯು ಎದ್ದು ನಿಂತು ವಿಜ್ಞಾಪಿಸುವಳು.-

ಪೂತನೆ:—(ಆರ್ಭಟದಿಂದ) ಎಲೈ ಪ್ರಭುವೆ ! ಕಂಸಭೂಪಾಲಾ! ಈಕಾರ್ಯಕ್ಕೆ ಇವರೊಬ್ಬರೂ ಅರ್ಹರಲ್ಲವು. ಮಕ್ಕಳ ವಿಚಾರವನ್ನು ಇವರೇನುಬಲ್ಲರು ? ಮಕ್ಕಳನ್ನು ಕೊಲ್ಲುವುದರಲ್ಲಿ ನಾನು ಬಹಳ ಸಮರ್ಥಳು. ಹಸುಮಕ್ಕಳನ್ನು ಚಪ್ಪರಿಸಿ ನುಂಗುವುದರಲ್ಲಿ ನಾನು ಮಹಾಪ್ರೌಢೆಯು ಹತ್ತಾರು ಮಕ್ಕಳನ್ನು ಹಿಡಿದು ಬಾಳೆಯ ಹಣ್ಣುಗಳಂತೆ ಒಂದೇ ಸಲಕ್ಕೆ ನುಂಗುವೆನು. ಜೀಯಾ ! ಈಕಾರ್ಯಕ್ಕೆ ನನ್ನನ್ನು ನಿಯಮಿಸು. ಸಂದುಗೊಂದಿಗಳಲ್ಲಿಯೂ,ಮೂಲೆ ಮಡುಕುಗಳಲ್ಲಿಯೂ ಕಣ್ಣಲ್ಲಿ ಕಣ್ಣಿಟ್ಟು ಚೆನ್ನಾಗಿ ಹುಡುಕಿ, ಭೂಮಿಯಲ್ಲಿರತಕ್ಕ ಮಕ್ಕಳನ್ನೆಲ್ಲಾ ಹಿಡಿದು ನಿಶ್ಶೇಷವಾಗಿ ಕೊಲ್ಲುವೆನು. ಕೊಡು! ಅಪ್ಪಣೆಕೊಡು!!

ಕಂಸ:—ಭಳಿರೇ ಭಳಿ! ಪೂತನೆಯೇ! ನೀನಂತಹ ಪರಾಕ್ರಮವಂತೆಯೇ ಅಹುದು. ನೀನು ಹೇಳಿದಷ್ಟು ಕಾರ್ಯವನ್ನು ಮಾಡತಕ್ಕವಳೆಂದು ನಾನು ಬಲ್ಲೆನು. ನಿನ್ನ ಸಾಹಸಕ್ಕೆ ನಾನು ಮೆಚ್ಚಿದೆನು. ಈ ಕಾರ್ಯಕ್ಕೆ ನಿನ್ನನ್ನೇ ನಿಯಮಿಸಿರುವೆನು. ನಿನ್ನ ಚಾತುರ್ಯಬಲದಿಂದ ಈಕಾರ್ಯವನ್ನು ನಿರ್ವಹಿಸಿ ಕೀರ್ತಿಯನ್ನು ಪಡೆ.

ಪೂತನೆ:—ಅಪ್ಪಣೆ.

ಕಂಸ:—ಎಲೈ ನನ್ನ ಹಿತೈಷಿಗಳಾದ ಅಸುರವರ್ಯರೇ! ನಾರದರಿಂದ ನಾನು ಕೆಲವು ರಹಸ್ಯಗಳನ್ನರಿತಿರುವೆನು. ಆದುದರಿಂದ ನೀವೆಲ್ಲರೂ ನಾನಾಬಗೆಯಾದ ರೂಪಗಳನ್ನು ಧರಿಸಿ, ಗೋಕುಲಬೃಂದಾವನ ಪ್ರಾಂತ್ಯದಲ್ಲಿ ಸಂಚರಿಸುತ್ತ, ನಿಮ್ಮ ಬುದ್ಧಿಬಲದಿಂದ ಶತ್ರುಗಳನ್ನು ಕಂಡರಿತು ನಿರ್ದಾಕ್ಷಿಣ್ಯವಾಗಿ ಸಂಹಾರಮಾಡಿರಿ. ಜನರನ್ನು ಪೀಡಿಸುವುದರಲ್ಲಿ ಕ್ರೂರರಾದ ಅಸುರಕುಲದವರು ಹೇಗಿರಬೇಕು ಬಲ್ಲಿರೋ?

ಅಘಾಸುರ:—ಬಲ್ಲೆವು! ಬಲ್ಲೆವು!!

ಕಂಸ:—ಹೇಗೆ?

ಅಘಾಸುರ:—ಚಿತ್ತೈಸಬೇಕು.

ಶ್ಲೋ॥ ಸತ್ಯಂನಾಸ್ತಿ! ಶಮಂನಾಸ್ತಿ! ನಾಸ್ತಿನಾಸ್ತಿಪತಿವ್ರತಾ। ಧರ್ಮೋನಾಸ್ತಿ !
ದಯಾನಾಸ್ತಿ! ರಾಕ್ಷಸಾನಾಂಗೃಹೇಗೃಹೇ॥

ಸತ್ಯವೂ, ಇಂದ್ರಿಯನಿಗ್ರಹವೂ, ಪಾತಿವ್ರತ್ಯವೂ, ಧರ್ಮವೂ, ದಯೆಯೂ ನಮಗೆ ಘೋರಶತ್ರುಗಳಲ್ಲವೆ? ಇವುಗಳಲ್ಲಿ ಒಂದಾದರೂ ರಾಕ್ಷಸರ ಮನೆಯ ಬಾಗಲಿಗೆ ಬರಕೂಡದಲ್ಲವೆ?

ಕಂಸ:—ಭೇಷ್! ಅಘಾಸುರಾ! ಚೆನ್ನಾಗಿ ಹೇಳಿದೆ.

ಅಸುರರು:—ಈ ಮೂಲಮಂತ್ರವನ್ನು ನಾವೆಲ್ಲರೂ ಆಚರಣೆಯಲ್ಲೇ ಇಟ್ಟುಕೊಂಡಿರುವೆವು, ಮಹಾಪ್ರಭೂ!

ಕಂಸ:—ಬಹಳ ಸಂತೋಷ!

ಚಾಣೂರ:—ಈ ಸಂತೋಷ ಸೂಚನೆಗೆ ಸಲುವಾಗಿ ನಮ್ಮ ದರ್ಬಾರಿನಲ್ಲಿ ಸ್ವಲ್ಪಕಾಲ ನರ್ತನಗಾಯನಾದಿಗಳಾಗಬಹುದಲ್ಲವೆ?

ಕಂಸ:—ಆಹಾ! ಅಭ್ಯಂತರವೇನು? ಎಲೈ ಮಂತ್ರಿಯೆ! ನಮ್ಮ ಆಸ್ಥಾನದ ಗಾಯನ ಸಮಾಜದವರನ್ನು ಈಗಲೇ ಬರಮಾಡು.

ಮಂತ್ರಿ:—ಅಪ್ಪಣೆ.

[ಮಂತ್ರಿಯು ಚಾರರನ್ನು ಕಳುಹಿಸಿ ಕಂಸನ ಆಸ್ಥಾನದ ಗಾಯನ ಸಮಾಜದವರನ್ನು ಬರಮಾಡುವನು. ನರ್ತನಾಂಗನೆಯರೂ, ವಾದ್ಯಗಾರರೂ, ಸಂಗೀತಗಾರರೂ ಪ್ರವೇಶಿಸುವರು.]

ವಿದೂಷಕನು, ವಿಕಾಕ್ಷಿ, ಗಜಕರ್ಣಿ, ಲಂಬೋದರಿ, ದೀರ್ಘನಾಸಿಕೆ, ವಕ್ರವದನೆ ಮುಂತಾದ ವಿಚಿತ್ರ ಸುಂದರಿಯರು ಪ್ರವೇಶಿಸಿ, ಕಂಸನಿಗೆ ನಮಸ್ಕರಿಸುವರು.

ಕಂಸ:—ಎಲೌ ಚೆಲುವೆಯರೆ! ಈ ನಮ್ಮ ಸಭಾಸದರನ್ನು ನಿಮ್ಮ ನರ್ತನಗಾಯನಾದಿಗಳಿಂದ ಸಂತೋಷಗೊಳಿಸಿರಿ.

ನರ್ತನಾಂಗನೆಯರು:—ಅಪ್ಪಣೆ.

ವಿಕಾಕ್ಷಿ:—ತನ್ನ ಒಂಟಿಗಣ್ಣಿಂದ ಸಭೆಯನ್ನೆಲ್ಲಾ ಒಂದುಸಾರಿ ಪರಿಕಿಸುವಳು.

ವಿದೂಷಕ:—ಆಹಾ! ಈ ವಿಲಾಸಿನಿಯ ಅಪಾಂಗವೀಕ್ಷಣವು ಕಾಕಾಸುರನ ದೃಷ್ಟಿಪಾತಕ್ಕಿಂತಲೂ ಬಹಳ ನಯವಾಗಿರುವುದು.

ವಕ್ರವದನೆ:—(ತನ್ನ ನೆತ್ತಿ ಬಾಯಿಂದ) ಸಸ್ಸಸ್ಸಸ್ಸಸ್ಸಭಿಕರಿಗೆ-ದದ್ದದ್ದದ್ದದ್ದಂಡಗಳು!

ವಿದೂಷಕ:—ಆಹಾಹಾಹಾಹಾ! ಏನು ವಾಕ್ಶುದ್ಧಿ! ಏನುಕಥೆ!

(ಚಾರನು ಪ್ರವೇಶಿಸುವನು)

ಚಾರ:—ಜಯವಾಗಲಿ ಕಂಸಭೂಪಾಲನಿಗೆ!

ಕಂಸ:—ಏನು ಸಮಾಚಾರ?

ಚಾರ:—ಯಾರೋ ಒಬ್ಬ ವಿದ್ವಾಂಸನು ಬಂದಿರುವನು.

ಕಂಸ:—ಒಳಗೆ ಬರಮಾಡು.

ಚಾರ:—ಅಪ್ಪಣೆ.

(ವಿದ್ವಾಂಸನು ಒಡ್ಡೋಲಗಕ್ಕೆ ಬರುವನು.)

ವಿದ್ವಾಂಸ:—ರಾಜನ್! ಕಲ್ಯಾಣಮಸ್ತು.

ಕಂಸ:—(ಅಟ್ಟಹಾಸದಿಂದ) ಎಲೈ ನೀನು ಯಾರು? ಎಲ್ಲಿಂದ ಬಂದೆ?

ವಿದ್ವಾಂಸ:—(ತನ್ನಲ್ಲಿ) ಲಕ್ಷಣವಾಯಿತು! ಇನ್ನೂ ಒಂದೆರಡು ಮಾತಗಳನ್ನಾದರೂ ಆಡುವುದಕ್ಕಿಲ್ಲ. ಒಂದು ಪೀಠದಲ್ಲಿ ಕೂಡುವಂತಾದರೂ ಹೇಳಲಿಲ್ಲ. ಹಿಂದೆಯೆಂದೂ ನೋಡಿದವನಲ್ಲ. ಪರಿಚಯವಿಲ್ಲ.

ಇಷ್ಟು ಅಲಕ್ಷ್ಯವಾಗಿ ಮಾತನಾಡುತ್ತಿರುವನಲ್ಲಾ, ಇದ್ದುಇದ್ದು ನಾನು ಒಳ್ಳೆಯ ಸ್ಥಳಕ್ಕೇ ಬಂದೆನಲ್ಲಾ ! ಆಗಲಿ, ಮತ್ತೇನು ವಿಚಿತ್ರಗಳು ನಡೆಯುವುವ್ರೋ ನೋಡುವೆನು.

ಕಂಸ:--ನಿನಗೆ ಏನೇನು ವಿದ್ಯೆಗಳು ಬರುತ್ತವೆ?

ವಿದ್ವಾಂಸ:--ಸರಿಸರಿ! ಈತನು ಮಾಡಿದ ಉಪಚಾರಕ್ಕೆ ಸಲು ವಾಗಿ ವಿದ್ವತ್ಪರೀಕ್ಷೆಯೂ ಆಗಬೇಕೋ ?

ಕಂಸ:--ಏಕೆ ಸುಮ್ಮನಿರುವೆ ? ನಿನಗೆ ಬರತಕ್ಕ ವಿದ್ಯೆಗಳನ್ನೆಲ್ಲಾ ಸ್ವಲ್ಪಸ್ವಲ್ಪ ಹೇಳು ನೋಡೋಣ !

ವಿದ್ವಾಂಸ:--(ತನ್ನಲ್ಲಿ) ಇವನ ರಸಿಕತ್ವವನ್ನು ಎಷ್ಟು ಕೊಂಡಾಡಿದರೂ ಸಾಲದು. ಎಲ್ಲಾ ವಿದ್ಯೆಗಳನ್ನೂ ಸ್ವಲ್ಪ ಸ್ವಲ್ಪ ಹೇಳಬೇಕಂತೆ! ನಾನು ಹೇಳಿದರೆ, ಇವನು ನೋಡುವನಂತೆ! ಹೇಳುವುದನ್ನು ಕೇಳುವುದು ಸಹಜವು. ನೋಡುವುದು ಹೇಗೆ?

ಕಂಸ:--ಏಕೆ ಮಂಕುಸಿದ್ಧನಂತೆ ಮಿಡುಕರಿಸುತ್ತಿರುವೆ?

ಅಘಾಸುರ :--ಇಂತಹ ಮಹಾಸಭೆಯಲ್ಲಿ ಮಾತನಾಡಬೇಕಾದರೆ ಎಲ್ಲರಿಗೂ ಸಾಧ್ಯವೇ ಮಹಾ ಪ್ರಭೂ ?

ವಿದ್ವಾಂಸ:--ಅಲ್ಲವೇಮತ್ತೆ! ಈಪಾಟಿ ಘನಪಂಡಿತರಿರುವ ಸಭೆಯಲ್ಲಿ ಯಾವ ವಿದ್ವಾಂಸನು ತಾನೇ ಮಾತನಾಡಬಲ್ಲನು?

ಧೇನುಕಾಸುರ:--ಇವನೆಲ್ಲೋ ಕಾಡಿನಿಂದ ಬಂದ ಕೋತಿಯಂತೆ ಕಾಣುವನು. ಇಂಥವನು ನಮ್ಮ ಸಭೆಗೇ ಅರ್ಹನಲ್ಲ.

ವಿದ್ವಾಂಸ:--(ಪ್ರಕಾಶವಾಗಿ) ಅದು ನಿಜ!

ಶ್ಲೋ॥ ಹಂಸೋನಭಾತಿಬಲಿಭೋಜನಬೃಂದಮಧ್ಯೇ ।
ಗೋಮಾಯುಮಂಡಲಗತೋನವಿಭಾತಿಹರಿಣಃ ।
ಜಾತ್ಯೋನಭಾತಿತುರಗಃಖರಯೂಥಮಧ್ಯೇ ।
ವಿದ್ವಾನ್ನಭಾತಿಪುರುಷೇಷುನಿರಕ್ಷರೇಷು ॥

ಕಾಗೆಗಳ ಗುಂಪಿನ ಮಧ್ಯದಲ್ಲಿ ಹಂಸವೂ, ನರಿಗಳ ಮಧ್ಯದಲ್ಲಿ ಸಾರಂಗವೂ, ಕತ್ತೆಗಳ ಮಧ್ಯದಲ್ಲಿ ಕುದುರೆಯೂ ಹೇಗೆ ಶೋಭಿಸು

ವುದಿಲ್ಲವೋ, ಅದರಂತೆಯೇ ನಿರಕ್ಷರಕುಕ್ಷಿಗಳಾದ ಈ ನಿರ್ಭಾಗ್ಯರ ಮಧ್ಯದಲ್ಲಿ ನನ್ನ ಪಾಂಡಿತ್ಯವನ್ನು ಕೇಳತಕ್ಕವರಾರೂ ಇಲ್ಲವಾದಾಗ್ಯೂ ಇಲ್ಲಿನ ವಿಚಿತ್ರಗಳನ್ನು ನೋಡಿ ನಾನಾದರೂ ಸಂತೋಷಪಡುವೆನು.

ಕಂಸ:--ಏನಯ್ಯಾ! ನಿನಗೆ ಸಂಗೀತ ಬರುತ್ತದೆಯೆ?

ವಿದ್ವಾಂಸ:--ಸ್ವಲ್ಪಮಟ್ಟಿಗೆ ಬರುತ್ತದೆ.

ಕಂಸ:--ಎಲ್ಲಿ! ಸ್ವಲ್ಪ ಹಾಡು ನೋಡೋಣ!

ವಿದ್ವಾಂಸ:--ಆಗಬಹುದು. (ಎಂದು ಹಾಡತೊಡಗುವನು.)

ರಾಗ—ಈಶಮನೋಹರಿ—ರೂಪಕ.

ಶ್ರೀರಘುರಾಮಂಭಜರೇ। ಚಿತ್ತಸದಾ। ನಂದಮಯಂ॥ ಪಲ್ಲವಿ॥
ಸಾರಿಗ ರೀ। ರೀಗಮಪಾ। ನೀಧಪಮಾ। ಗಾರಿ ಸ ನೀ ॥ ಪಲ್ಲವಿ॥
ವಾರಿಜಾ ಸ। ನಾದಿನುತಂ। ವಾರಣಸಂ। ತಾಪಹರಂ॥ ಅನುಪಲ್ಲವಿ
ಗಾಗಮಾಮ। ಪಾಸನಿಸಾ। ನೀಧನಿಪಾ। ಮಾಗರಿಸನಿ॥ ಅನುಪಲ್ಲವಿ
ನಾಗರಾಜ। ಸೇವಿತಂ। ನರಸುರಾದಿ। ಪೂಜಿತಂ॥ ಚರಣ॥
ರೀಗಮಾರಿ। ಗಾಸರೀ। ಸನಿಧಪಾಗ। ರೀನಿಸಾ॥ ಚರಣ॥
ಯೋಗಿಮಾನ। ಸಾಲಯಂ। ರಾಗಲೋಭ। ವರ್ಜಿತಂ॥ ಚರಣ॥
ನೀ ಗ ರೀಮ। ಗಾಪಮಾ। ಪಾಗಮಾ ರಿ। ಗಾಪಮಾ॥ ಚರಣ॥
ಶ್ರೀಗೌರೀನಾಥಮುದಿತಂ। ಶಿವರಾಮಹೃದಯನಿಲಯಂ॥ ಚರಣ॥
ಸಾಸನ್ನೀಧಾನಿ ಧ ಪಮ। ಗಮಪಾಧಪ ಧ ನಿಸ ನಿ ಸಾ॥ ಚರಣ॥
ಸಾಗರಶಯನಂವಿಮಲಂ। ಸಂತತಪರಮಾನಂದಂ॥ ಚರಣ॥
ರೀಗಮರಿ ಗ ಸಾನಿಧಪಾ। ನಿನ್ನೀಧಪಮಗರ್ರೀಸನಿ ॥ ಚರಣ॥

ಎಂದು ಮನೋಹರವಾಗಿ ವರ್ಣವನ್ನು ಹಾಡಲಾರಂಭಿಸುವನು.

ವಕ್ರವದನೆ:—ಹಾ ಹಾ ಹಾ! ಸಾಕು, ಸಾಕು, ನಿಲ್ಲಿಸು, ನಿಲ್ಲಿಸು.

ಕಂಸ:—ಏಕೆ?

ವಕ್ರವದನೆ:—ಇವನ ಹಾಡಿಕೆಯು ಅಪಶಬ್ದಮಯವಾಗಿದೆ.

ಕಂಸ:--ಹೇಗೆ?

ವಕ್ರವದನೆ:—ಇವನಿಗೆ ಸ್ವರಜ್ಞಾನವೇಯಿಲ್ಲ. ಕಡೆಗೆ ಸಪ್ತ ಸ್ವರಗಳ ಅಕ್ಷರ ನಿಬಂಧನೆಯಾದರೂ ತಿಳಿದವನಲ್ಲ.

ಕಂಸ:—ಅದು ಹೇಗೆ ?

ವಕ್ರವದನೆ:—ಎಲ್ಲಿ ಇವನ ಬಾಯಿಂದ ಸಪ್ತಸ್ವರಗಳು ಹೊರಡಲಿ ನೋಡೋಣ ?

ಕಂಸ:—ಎಲೈ ಪಂಡಿತನೇ ! ಸಪ್ತಸ್ವರಗಳನ್ನು ಹೇಳು, ಕೇಳುವ

ವಿದ್ವಾಂಸ:—ಸ-ರಿ-ಗ-ಮ-ಪ-ದ-ನಿ

ವಕ್ರವದನೆ:—ಲಂಬೋದರಿಮುಂತಾದ ನರ್ತನಾಂಗನೆಯರೆಲ್ಲರೂ ಒಂದೇಧ್ವನಿಯಿಂದ ತಪ್ಪು-ತಪ್ಪು ಎಂದು ಕೂಗುತ್ತ ನಗುವರು.

[ವಿದ್ವಾಂಸನು ಭ್ರಾಂತನಾಗುವನು.]

ಕಂಸ:—ಏನು ತಪ್ಪು ?

ವಕ್ರವದನೆ:—ಪ್ರಭುವೇ ! ಚಿತ್ತೈಸಬೇಕು. ಸ್ವರಗಳಲ್ಲಿ ಒಂದು "ಸ" ಎಂತಲೂ, ಮತ್ತೊಂದು "ರಿ" ಎಂತಲೂ ಇರುತ್ತವೆಯೆ ? ಒಂದಕ್ಕೆ "ಸ" ಎಂಬ ತಲೆಕಟ್ಟು, ಮತ್ತೊಂದಕ್ಕೆ "ರಿ" ಎಂದು ಗುಡಿಸೂ ಇರುತ್ತದೆಯೆ ? ಇದು ಶಾಸ್ತ್ರವಿರುದ್ಧವು. ಯಾವುದಾದರೂ ಒಂದು ವಿಧವಾಗಿರಬೇಕು.

ಕಂಸ:—ಅಹುದಹುದು ! ಈವಿಚಾರದಲ್ಲಿ ನನಗೂ ಸ್ವಲ್ಪ ಸಂಶಯುವುಂಟು.

ವಿದ್ವಾಂಸ:—ಚೆನ್ನಾಯಿತು !

ವಕ್ರವದನೆ:—ಅಹುದು-ಮಹಾಪ್ರಭೂ ! ಇದ್ದರೇ ಸ-ರ-ಗ-ಮ-ಪ-ದ-ನ, ಎಂದಿರಬೇಕು. ಇಲ್ಲವೇ ಸಿ-ರಿ-ಗಿ-ಮಿ-ಪಿ-ದಿ-ನಿ, ಎಂದಿರಬೇಕು. ಹಾಗಲ್ಲದೆ, ಒಂದನ್ನು "ಸ" ಎಂತಲೂ, ಮತ್ತೊಂದನ್ನು "ರಿ" ಎಂತಲೂ ಹೇಳಬೇಕಾದ ಕಾರಣವೇನು ?

ಅಸುರರೆಲ್ಲರೂ:—ಭೇಷ್ ! ಭೇಷ್ ! ಬಹಳ ಸಮಂಜಸವಾದ ಮಾತು. ಇದ್ದರೆ ಎಲ್ಲಕ್ಕೂ ಅಕಾರಗಳೇ ಇರಬೇಕು. ಇಲ್ಲವೇ ಎಲ್ಲಕ್ಕೂ ಇಕಾರಗಳೇ ಇರಬೇಕು. ವಕ್ರವದನೆಯ ಮಾತು ನ್ಯಾಯವಾಗಿದೆ.

ಕಂಸ:—ಸರಿ ! ನನ್ನಭಿಪ್ರಾಯವನ್ನೇ ಎಲ್ಲರೂ ವ್ಯಕ್ತಪಡಿಸಿದಿರಿ. ನಮ್ಮ ದೇಶದ ಸಂಗೀತಗಾರರೆಲ್ಲರೂ ಇನ್ನು ಮೇಲೆ ಸಪ್ತಸ್ವರಗಳನ್ನು, ಸ-ರ-ಗ-ಮ-ಪ-ದ-ನ-ಎಂತಲೇ ಹಾಡತಕ್ಕದ್ದೆಂದು ತೀರ್ಮಾನಿಸಿರುವೆನು.

ವಿದ್ವಾಂಸ:—ಪರಂತು ಇದೂ ಒಂದರ್ಥಕ್ಕೆ ಸರಿಹೋಗುತ್ತದೆ. ಇವರು ತೀರ್ಮಾನಿಸಿದಂತೆ, "ಸ-ರ-ಗ-ಮ-ಪ-ದ-ನ" ಎಂಬ ಸ್ವರಗಳಲ್ಲಿ ಒಂದೊಂದನ್ನೇ ವಿವರಿಸಿದರೆ, "ಸ" ಸಮಸ್ತ "ರ" ರಕ್ಕಸರ "ಗ" ಗರ್ವವ್ರೂ, "ಮ" ಮದವ್ರೂ, "ಪ" ಪಟಾಟೋಪವ್ರೂ, "ದ" ದರ್ಪವ್ರೂ, "ನ" ನಶಿಸಿಹೋಗುತ್ತವೆ. ಅಥವಾ ರಾಕ್ಷಸರೆಲ್ಲರೂ ನಾಶವಾಗತಕ್ಕ ಕಾಲವು ಸಮೀಪಿಸಿದೆ, ಎಂದರ್ಥವಾಗುತ್ತದೆ.

(ಎಂದು ಬೆರಳುಗಳನ್ನೆಣಿಸುತ್ತ, ಅರ್ಥ ಮಾಡುತ್ತಿರುವ ವಿದ್ವಾಂಸನನ್ನು ನೋಡಿ ಅಸುರರೆಲ್ಲರೂ ನಗುವರು.)

ವಕ್ರವದನೆ:—ಎಲೈ ಮಂಕುಸಿದ್ಧನೇ ! ಸ್ವರಗಳ ಉಚ್ಚಾರಣೆಯನ್ನು ಕುರಿತ ನಮ್ಮ ತೀರ್ಮಾನವು ಈಗಲಾದರೂ ತಿಳಿಯಿತೋ ? ಅದರಂತೆ ಹೇಳುವೆಯಾ ?

ವಿದ್ವಾಂಸ:—ಕಿಂ ?

ವಕ್ರವದನೆ:—ಅಯ್ಯೋ, ಬೆಪ್ಪುನಾಥನೇ ! ನಿನಗೆ "ಕಿಂ" ಒಂದೇ ಗೊತ್ತು, ಬೇಕಾದರೆ ನಾನೊಂದು ಹತ್ತು ಹೇಳುವೆನು, ಕಲಿತುಕೊ. ಕಿಂ-ಚಿಂ-ಗಂ-ಲಂ-ಭಂ-ಡಂ-ಶಂ-ಹ್ರಾಂ-ಹ್ರೀಂ-"ಹ್ರೂಂ"

ಅಸುರರೆಲ್ಲರೂ:—(ಒಂದೇ ಧ್ವನಿಯಿಂದ) ಬೇಷ್ ಬೇಷ್ ! ಆ ಹೊಸ ಪಂಡಿತನು ಬಾಯಿತಪ್ಪಿ "ಕಿಂ" ಎಂಬ ಒಂದು ಮಾತನ್ನಾಡಿದ್ದಕ್ಕೆ ನಮ್ಮ ವಕ್ರವದನೆ ನೋಡಿದಿರೋ ಪಟಪಟನೆ ಹತ್ತು ಮಾತುಗಳಾಡಿ ಪಂಡಿತನ ಬಾಯಿ ಮುಚ್ಚಿಸಿಬಿಟ್ಟಳು! ಭಳಿರೇ ವಕ್ರವದನೆ! ಪಂಡಿತಳೆಂದರೆ ನೀನೇಸರಿ ! (ಎಂದೆಲ್ಲರೂ ಚಪ್ಪಾಳೆ ತಟ್ಟುವರು.)

ವಿದ್ವಾಂಸ:—ಅಸ್ಪಷ್ಟವಾಯಿತು. ಈಮೂರ್ಖ ಶಿಖಾಮಣಿಗಳ ಬಳಿಯಲ್ಲಿ ನನ್ನ ಪಾಂಡಿತ್ಯವೇನೂ ಜರುಗುವಹಾಗೆ ಕಾಣಲಿಲ್ಲ. ನಾನಿನ್ನು ಹೊರಡುವುದೇ ಲೇಸು. (ಎಂದು ಯೋಚಿಸುತ್ತಿರುವನು.)

ಕಂಸ:—ಏನಯ್ಯಾ ! ಈಸ್ವರಗಳ ಹೊರತು ಮತ್ತೇನೂ ಬರುವುದಿಲ್ಲವೋ ?

ವಿದ್ವಾಂಸ:—ಮತ್ತೆ ಕೆಲವು "ದೇವರ ನಾಮಗಳು" ಬರುತ್ತವೆ.

ಅಘಾಸುರ:—ಯಾವ ದೇವರ ನಾಮವದು ?

ವಿದ್ವಾಂಸ:—ಭಗವಂತನ ನಾಮಗಳು.

ಅಘಾಸುರ:—ಸಾಕು, ಸಾಕು, ನಿಲ್ಲಿಸು ! ಅಂಥವುಗಳಿಗೆಲ್ಲಾ ಇಲ್ಲಿ ಲೇಶಮಾತ್ರವೂ ಅವಕಾಶವಿಲ್ಲವು.

ವಿದ್ವಾಂಸ:—ತಿಳಿಯದೇ ಕೇಳುತ್ತೇನೆ. ಕ್ಷಮಿಸಬೇಕು. ಇಲ್ಲಿ ಭಗವದ್ವಿಷಯಕ್ಕೆ ಸ್ವಲ್ಪವೂ ಅವಕಾಶವಿಲ್ಲವೆಂದು ಕಾಣುತ್ತದೆ!

ಅಘಾಸುರ:—ಇಲ್ಲ! ಇಲ್ಲ !! ಇಲ್ಲ !!!

ವಿದ್ವಾಂಸ:—ಹಾಗಾದರೇ ಇಲ್ಲಿ ಮತ್ತಾವ ವಿಷಯಗಳಿಗೆ ಅವಕಾಶ ವುಂಟು ?

ಅಘಾಸುರ:—ಕೋಳಿ ಹುಂಜುಗಳ ಹೋರಾಟಗಳು, ಟಗರುಗಳ ಹೊಡೆದಾಟಗಳು, ಕೋತಿಗಳ ಕುಸ್ತಿ, ಮುಂತಾದ ವಿನೋದಗಳಿಗೂ, ಜೂಜಾಟಗಳಿಗೂ, ನರ್ತನಾಂಗನೆಯರ ನಾಟ್ಯಕ್ಕೂ, ಪಾನದಲಾಹಿರಿಗೂ, ಮತ್ತೂ ನಮಗೆ ಸಂತೋಷಕರವಾದ ಕಾರ್ಯಗಳಿಗೂ ಸಾಕಾದಷ್ಟು ಬಹುಮಾನವನ್ನು ಕೊಡುತ್ತೇವೆ.

ವಿದ್ವಾಂಸ:—ಈವಿಧವಾದ ತಿಳಿವಳಿಕೆಯಿಲ್ಲದ ನನ್ನಂಥವನಿಗೇನು ಕೊಡುವಿರಿ ?

ಅಘಾಸುರ:—ನೀನು ನಮ್ಮ ಕಂಸಭೂಪಾಲನಮೇಲೆ ಕೆಲವು ಕೀರ್ತನೆಗಳನ್ನು ಕವಿತ್ವ ಮಾಡಿಹೇಳು. ನಿನಗೂ ಬಹುಮಾನ ಮಾಡುತ್ತೇವೆ.

ವಿದ್ವಾಂಸ:—ಈತನ ಮೇಲೆ ಕವಿತ್ವ ಮಾಡಬೇಕಾದ ಪಕ್ಷಕ್ಕೆ, ಈತನು ಮಾಡಿರುವ ಘನತರವಾದ ಕಾರ್ಯಗಳಾವುವೆಂಬುದನ್ನು ದಯವಿಟ್ಟು ತಿಳಿಸುವಿರಾ ?

ಅಘಾಸುರ:—ಆಹಾ! ಈ ನಮ್ಮ ಕಂಸಭೂಪಾಲನ ಹೆಸರನ್ನು ಕೇಳುತ್ತಲೇ ಇಂದ್ರಾದಿ ದೇವತೆಗಳೂ, ಋಷಿಮುನಿಗಳೂ ದಿಕ್ಕಾಪಾಲಾಗಿ ಓಡಿಹೋಗುವರು. ಈ ಧೀರನು ಅನೇಕ ಮಂದಿ ಸ್ತ್ರೀಯರನ್ನು ಬಲಾತ್ಕಾರವಾಗಿ ಸೆಳೆತಂದು ಸೆರೆಯಲ್ಲಿ ಹಾಕಿರುವನು. ತನ್ನ

ತಂಗಿಯ ಮಕ್ಕಳನ್ನೆಲ್ಲಾ ಚೂರುಚೂರಾಗಿ ಕಡಿದು ಹಾಕಿರುವನು. ತನ್ನ ತಂದೆಯಾದ ಉಗ್ರಸೇನನನ್ನು ಸೆರೆಯಲ್ಲಿ ಬಂಧಿಸಿರುವನು. ಹೀಗೆಯೇ ಇನ್ನೂ ಎಷ್ಟೋ ಕಾರ್ಯಗಳನ್ನು ಮಾಡಿರುವನು.

ವಿದ್ವಾಂಸ:—(ತನ್ನಲ್ಲಿ)ಎಷ್ಟು ಕಲ್ಯಾಣ ಗುಣಗಳು! ಏನುಕಥೆ! ಇವುಗಳನ್ನು ಕವಿತ್ವ ಮಾಡಿ ನಾನು ಹೇಳಬೇಕಲ್ಲವೆ? ರಾಮ! ರಾಮ!

(ಎಂದು ಬಗೆಯುತ್ತಿರುವನು.)

ಕಂಸ:—ಎಲೌ ವಕ್ರವದನೆಯೆ! ನಿನ್ನ ಮನಃಪೂರ್ತಿಯಾಗಿ ಒಂದುಸಾರಿ ಹಾಡು! ಕೇಳುವೆನು.

[ವಕ್ರವದನೆ ಮುಂತಾದ ಅಸುರ ಸ್ತ್ರೀಯರು.]

ರಾಗ—ಜಂಜೂಟಿ—ಏಕತಾಳ.

ರಾಜರಾಜನೇ! ರಾಜತೇಜನೇ! ರಾಜಭೋಜಕಂಸಮಹಾ। ರಾಜರಾಜನೇ ॥ಪ॥

[ಎಂದು ತಮ್ಮ ವಿಕಾರಸ್ವರಗಳಿಂದ, ಹಾಡುತ್ತಲೇ ಸುತ್ತುಮುತ್ತಲಿದ್ದ ಕತ್ತೆಗಳೆಲ್ಲವೂ ಕೂಗಲಾರಂಭಿಸುವುವು.]

ಕಂಸ:—ಇದೇಕೆ, ಸುತ್ತುಮುತ್ತಲೂ ಕತ್ತೆಗಳು ಕೂಗಲಾರಂಭಿಸಿದುವು?

ಅಘಾಸುರ:—ಅದುದು ಮಹಾ ಪ್ರಭೂ! "ಶಿಶುರ್ವೇತ್ತಿಪಶುರ್ವೇತ್ತಿ" ಎಂದಲ್ಲವೇ ಶಾಸ್ತ್ರವು. ಗಾರ್ದಭಗಳು ಪಶುಜಾತಿಗೆ ಸೇರಿದುವುಗಳಲ್ಲವೆ! ಆದುದರಿಂದ, ಶಾಸ್ತ್ರೋಕ್ತವಾದ ಈ ಗಾನವನ್ನು ಕೇಳಿ ಕತ್ತೆಗಳು ಕೂಡಾ ಸಂತೋಷಪಟ್ಟಿರುತ್ತವೆ.

ಕಂಸ:—ನಿಜ! ಆದರೆ ಸಂಗೀತವನ್ನು ಕೇಳುತ್ತಲೆ, ಗಂಧರ್ವರು ಕಿನ್ನರರು-ಕಿಂಪುರುಷರು ಮುಂತಾದ ದೇವತೆಗಳು ಬರುವರಂತಲ್ಲಾ!

ಅಘಾಸುರ:—ಓಹೋ! ಕ್ಷಮಿಸಬೇಕು. ಮಹಾ ಪ್ರಭುಗಳು ಮರೆತುಹೋದಂತಿದೆ. ಈ ನಮ್ಮ ಚಲುವೆಯರ ಗಾನಕ್ಕೆ ಸೊಕ್ಕಿ ದೇವತೆಗಳೇನೋ ಇಲ್ಲಿಗೆ ಬರಲು ಸಿದ್ಧರಾಗಿರಬಹುದು. ಆದರೆ, ಅವರು ಬಾರದಿರುವುದಕ್ಕೆ ತಕ್ಕ ಕಾರಣವಿರುವುದಲ್ಲಾ!

ಕಂಸ:—ಏನದು?

ಅಘಾಸುರ:—ದೇವತೆಗಳ ಪಾಲಿಗೆ ಮೃತ್ಯುದೇವತೆ ಎಂಬ ಬಿರುದಾಂಕಿತರಾದ ತಾವು ಸಿಂಹಾಸನಾಸೀನರಾಗಿರುವುದರಿಂದ ಅವರಿಲ್ಲಿಗೆ ಬರಲು ಹೆದರುತ್ತಿರುವರಷ್ಟೆ!

ಕಂಸ:—ಇದೀಗ ಸರಿಯಾದಭಿಪ್ರಾಯವು. ಖೂಳರಾದ ಆ ದೇವತೆಗಳು ನಾನಿರುವಲ್ಲಿಗೆ ಬರುವುದಕ್ಕೆ ಹೆದರುವರೆಂಬುದೇನೋ ನಿಜವಾದ ಮಾತು. ಬೇಷ್! ಅಘಾಸುರನೇ! ನಿನ್ನ ಬುದ್ಧಿಸೂಕ್ಷ್ಮತೆಯು ಮೆಚ್ಚತಕ್ಕುದು!

ಅಘಾಸುರ:—ಎಲ್ಲವೂ ತಮ್ಮ ಪರಾಕ್ರಮ ವಿಶೇಷವಷ್ಟೆ!

ಕಂಸ:—ಯಾರಲ್ಲಿ?

ಚಾರ:—ಏನಪ್ಪಣೆ.

ಕಂಸ:—ಈಸುಂದರಿಯರಿಗೆ ಬೇಕಾದಷ್ಟು ಬಹುಮಾನಗಳನ್ನು ಕೊಡುವಂತೆ ಧನಪಾಲನಿಗೆ ತಿಳಿಸು.

ಚಾರ:—ಅಪ್ಪಣೆ!

(ನರ್ತನಾಂಗನೆಯರು ನಿಷ್ಕ್ರಮಿಸುವರು.)

ಅಘಾಸುರ:—ಎಲೈ ವಿದ್ವಾಂಸನೇ! ನಮ್ಮ ಕಂಸಭೂಪಾಲನನ್ನು ಬಣ್ಣಿಸಿ ಹಾಡುವುದಾದರೆ ನಿನಗೂ ಬಹುಮಾನವು ದೊರೆಯುತ್ತದೆ.

ವಿದ್ವಾಂಸ:—(ತನ್ನಲ್ಲಿ.)

ಶ್ಲೋ॥ ನಾಥೇನಃಪುರುಷೋತ್ತಮೇತ್ರಿಜಗತಾಮೇಕಾಧಿಪೇಚೇತಸಾ। ಸೇವ್ಯೇಸ್ಯ ಸ್ಯಪದಸ್ಯದಾತರಿಸುರೇನಾರಾಯಣೇತಿಷ್ಠತಿ। ಯಂಕಂಚಿತ್ಪುರುಷಾಧಮಂ ಕತಿಪಯಗ್ರಾಮೇಶಮಲ್ಪಾರ್ಥದಂ । ಸೇವಾಯೈಮೃಗಯಾಮಹೇವರಮಹೋಮೂಕಾವರಾಕಾವಯಂ॥

ಜಗನ್ನಾಥನೂ, ಪುರುಷೋತ್ತಮನೂ, ಮೂರು ಲೋಕಗಳಿಗೂ ತಾನೊಬ್ಬನೇ ಪ್ರಭುವಾದ ಜಗದೇಕ ಚಕ್ರವರ್ತಿಯೂ, ಮನಸ್ಸಿನಿಂದ ಸೇವಿಸಲ್ಪಡತಕ್ಕವನೂ, ತನ್ನನ್ನು ಆಶ್ರಯಿಸಿದವರಿಗೆ ಅಖಿಲಾರ್ಥ ಲಾಭವನ್ನುಂಟುಮಾಡತಕ್ಕವನೂ, ಭಗವಂತನೂ ಆದ ಶ್ರೀಮನ್ನಾರಾಯಣನು ಸರ್ವತ್ರ ವಿರಾಜಿಸುತ್ತಿರುವಾಗ ಆತನನ್ನು ಬಿಟ್ಟು, ಕುಲಗೋತ್ರ ನಾಮಗಳ ಸ್ಮೃತಿಯಿಲ್ಲದವನೂ, ನೀಚನೂ, ಕೆಲವು ಗ್ರಾಮಗಳಿಗೆ

ಮಾತ್ರವೇ ಅಧಿಕಾರಿಯೂ, ಅತ್ಯಲ್ಪವಾಗಿ ಕೊಡತಕ್ಕವನೂ ಆದ ಈ ರಾಕ್ಷಸಾಧಮನನ್ನು ಹೊಗಳಿ ನಾನೇಕೆ ನರಕಭಾಜನನಾಗಬೇಕು? ಛೀ ಛೀ! ನನ್ನ ಬುದ್ಧಿಗೆ ಧಿಕ್ಕಾರವಿರಲಿ! ಇಷ್ಟು ಪರ್ಯಂತರ ನಾನು ಮೂರ್ಖನಾಗಿದ್ದುದೇ ಸಾಕು! ಇನ್ನು ನರಾಧಮರನ್ನು ಸೇವಿಸುವುದಿಲ್ಲ. ನಾರಾಯಣನನ್ನು ಸೇವಿಸಿ ಮುಕ್ತನಾಗುವೆನು!

ರಾಗ—ಶಂಕರಾಭರಣ—ಆದಿ.

ಸದಾನಂದಮಯಪದಾರವಿಂದವ। ಸದಾಭಜಿಸುವೆನುದೇವನಿನ್ನುದಾರಚರಿತವಮುದಾಂತರಂಗದಿ। ಸದಾಭಜಿಪೆನಾರಾಯಣಾ ॥ ಪ ॥

ಸುರೇಂದ್ರತೋಷಣ ಕರೀಂದ್ರಪೋಷಣ ಮುನೀಂದ್ರಮಾನಸ ಭೂಷಣಾ। ನರೇಂದ್ರನಿಸ್ತುಲಮೃಗೇಂದ್ರರೂಪಸುವಿರಾಜಮಾನಬುಧಾವನಾ ॥ ಸದಾ ॥

ಭವಾಬ್ಧಿತಾರಣಪ್ರಶಾಂತಕಾರಣಖಗೇಂದ್ರವಾಹನಪಾವನಾ। ವಿವೇಕತೋರಣವಿಕಾಸಪೂರಣವಿನೀತಶಿವರಾಮಾವನಾ ॥ ಸದಾ ॥

[ಎಂದು ಹಾಡುತ್ತ ತೆರಳುವನು.]

ಅಘಾಸುರ:—ಎಲೈ! ಏಕೆ ಹೊರಡುವೆ? ಬಹುಮಾನವು ಬೇಡವೇನು?

ವಿದ್ವಾಂಸ:—ಮಹಾಶಯರೇ! ಬೇಕಾದಾಗ ಬರುವೆನು.

(ಎಂದು ನಿಷ್ಕ್ರಮಿಸುವನು.)

ಕಂಸ:—ಒಳ್ಳೆಯದಾಯಿತು. ಎಲೈ ಶೂರಶಿಖಾಮಣಿಗಳಿರಾ! ನೀವೆಲ್ಲರೂ ನಿಮ್ಮ ನಿಮ್ಮ ಕಾರ್ಯಗಳನ್ನು ಎಚ್ಚರದಿಂದ ನೆರವೇರಿಸಿರಿ ನಾನು ಸಮಯೋಚಿತವಾಗಿ ಬಂದು ನಿಮ್ಮನ್ನು ಕಾಣುವೆನು.

ಎಲ್ಲರೂ:—ಅಪ್ಪಣೆಯಂತಾಗಲಿ.

ಕಂಸ:—ನಾನಿನ್ನು ತೆರಳುವೆನು.

ಅಸುರರೆಲ್ಲರೂ:—ನಮಸ್ತೇನಮಃ.

[ಎಲ್ಲರೂ ನಿಷ್ಕ್ರಮಿಸುವರು.]




ಆಶ್ರಿತಪಾರಿಜಾತಾಯನಮಃ.

ಶ್ರೀರಸ್ತು

# ಶ್ರೀ ಕೃಷ್ಣಲೀಲೆ

## ಚತುರ್ಥಾಂಕಂ.

### ಪ್ರಥಮ ರಂಗಂ.

**ಪ್ರದೇಶ:— ನಂದಗೋಕುಲ.**

ಇಂದುಲೇಖೆ, ಚಾರುಮತಿ, ಕಳಾವತಿ, ನಂದಿನಿ, ವಸಂತಮಾಲತಿ, ಭಾನುಮತಿ ಮುಂತಾದ ಗೋಪಸುಂದರಿಯರು, ಯಶೋದಾ ದೇವಿಗೆ ಪುತ್ರೋತ್ಸವಾದುದಕ್ಕಾಗಿ ತಮ್ಮ ಸಂತೋಷವನ್ನು ತಿಳಿಸಲೆಳಸಿ ನಂದಗೋಪನ ಮನೆಗೆ ಬರುವರು.

**ಗೋಪಸುಂದರಿಯರು:—**

ರಾಗ—ದೇಶಿತೋಡಿ—ಮಿಶ್ರತಾಳ.

**ಗೋಪಲತಾಂಗಿಯರೆಬೇಗಬನ್ನಿ । ಬೇಗಬನ್ನಿ ॥ ಪ ॥**
**ನಂದಸುಂದರಿಯಕಂದನನು ನೋಡುವನೋಡಿಬರುವ ॥ಗೋಪ॥ಅ—॥ಪ॥**
**ಅಂದಚಂದದಿಂದಬಹು ಸುಂದರರದಿಜನಿಸಿಹನೆಂದುಪೇಳುವರುಕಂದನನ್ನು ।**
**ಇಂದುಮುಖನನುನಾವಿಂದುನೋಡಿಬರುವ । ಮಂದಗಮನೆಯರೇಬನ್ನಿ ಬನ್ನಿಬೇಗ ॥ ಗೋಪ ॥**

ಇಂದುಲೇಖೆ: ಸಖೀ ಚಾರುಮತೀ! ನಮ್ಮ ಮಹಾರಾಣಿಯಾದ ಯಶೋದಾದೇವಿಗೆ ಪುತ್ರೋತ್ಸವವಾಗಿರುವುದಂತೆ. ಆ ಬಾಲಕನು ಜಗನ್ಮೋಹನಾಕಾರನಾಗಿರುವನಂತೆ. ನೀನಾಬಾಲಕನನ್ನು ನೋಡಿರುವೆಯಾ?

ಚಾರುಮತಿ:—ಇಲ್ಲವಮ್ಮಾ! ನಾನಿನ್ನೂ ನೋಡಲಿಲ್ಲ.

ಇಂದುಲೇಖೆ:—ನಂದಿನೀ! ನೀನು ನೋಡಿರುವೆಯಾ?

ನಂದಿನಿ:—ನಾನು ಯಶೋದಾದೇವಿಯ ಮನೆಗೆ ಹೋಗಿದ್ದರಲ್ಲವೇ ಮಗುವನ್ನು ನೋಡುವುದಕ್ಕೆ! ನಾನಾಕೆಯನ್ನು ನೋಡಿ ಬಹಳ ದಿವಸಗಳಾದುವು.

ಇಂದುಲೇಖೆ:—ಕಳಾವತೀ ! ನೀನು ನೋಡಿರುವೆಯಾ ?

ಕಳಾವತಿ:—ನಾನು ನೋಡಲಿಲ್ಲವಾದಾಗ್ಯೂ, ಗರ್ಗಾಚಾರ್ಯರು ಪತ್ನಿಯಾದ ಸುಮಿತ್ರಾದೇವಿಯಿಂದ ಕೇಳಬಲ್ಲೆನು.

ಇಂದುಲೇಖೆ:—ಏನೆಂದು ಕೇಳಿರುವೆ ?

ಕಳಾವತಿ:—ಆ ಬಾಲಕನು ದೇವಾಂಶ ಸಂಭೂತನೆಂತಲೂ, ಲಾವಣ್ಯಮೂರ್ತಿಯೆಂತಲೂ ಕೇಳಿರುವೆನಷ್ಟೆ !

ಇಂದುಲೇಖೆ:—ವಸಂತಮಾಲತೀ ! ನೀನು ನೋಡಿರುವೆಯಾ ?

ವಸಂತಮಾಲತಿ:—ನಾನು ನೋಡಿಲ್ಲ. ಆ ಶಿಶುವಿನ ನಾಮಕರಣದ ದಿವಸ ನಮ್ಮ ತಾಯಿಯು ಹೋಗಿ ನೋಡಿಬಂದಳು.

ಇಂದುಲೇಖೆ:—ಬಾಲಕನು ಹೇಗಿರುವನೆಂದು ನಿಮ್ಮ ತಾಯನ್ನು ಕೇಳಲಿಲ್ಲವೆ ?

ವಸಂತಮಾಲತಿ:—ಕೇಳಿದೆನು. ಒಬ್ಬೊಬ್ಬರ ಕಣ್ಣಿಗೆ ಒಂದೊಂದು ವಿಧವಾಗಿ ಕಾಣಿಸುವನಂತೆ.

ಇಂದುಲೇಖೆ:—ನಿಮ್ಮ ತಾಯಿಯು ಸದಾ ಭಗವತ್ಕಾಲಕ್ಷೇಪ ಮಾಡತಕ್ಕವಳಲ್ಲವೆ ? ಆಕೆಗೆ ಹೇಗೆ ಕಾಣಿಸಿದನೆಂಬುದನ್ನು ನೀನು ಕೇಳಲಿಲ್ಲವೆ ?

ವಸಂತಮಾಲತಿ:—ಕೇಳಿದೆನು.

ಇಂದುಲೇಖೆ:—ಏನು ಹೇಳಿದಳು ?

ವಸಂತಮಾಲತಿ:—ನಮ್ಮ ತಾಯಿಯ ಕಣ್ಣಿಗೆ, ನೀಲಮೇಘಶ್ಯಾಮನಾಗಿಯೂ, ಶ್ರೀವತ್ಸಕೌಸ್ತುಭ ವನಮಾಲಿಕಾ ವಿರಾಜಿತ ವಿಶಾಲ ವಕ್ಷನಾಗಿಯೂ, ಪದ್ಮಾಕ್ಷನಾಗಿಯೂ, ಶಂಖಚಕ್ರಗದಾಪದ್ಮಹಸ್ತನಾಗಿಯೂ, ಚತುರ್ಭುಜ ಪ್ರಶಸ್ತನಾಗಿಯೂ, ಕಟಕ-ಕಂಕಣ-ಕುಂಡಲ-ಕಿರೀಟಾದಿ ಸರ್ವಾಭರಣ ಭೂಷಿತನಾಗಿಯೂ, ಸುಂದರತರ ಕಪೋಲಗಳಿಂದ ಶೋಭಿತನಾಗಿಯೂ, ಪ್ರಸನ್ನವದನನಾಗಿಯೂ ಕಾಣಿಸಿದನಂತೆ.

ಇಂದುಲೇಖೆ:—ಮಿಕ್ಕವರಿಗೆ ಹೇಗೆ ಕಾಣಿಸಿದನೊ ?

ವಸಂತಮಾಲತಿ:—ಕೆಲವರಿಗೆ ಶೇಷಶಾಯಿಯಾಗಿಯೂ, ಕೆಲವರಿಗೆ ಕೋದಂಡಪಾಣಿಯಾಗಿಯೂ, ಕೆಲವರಿಗೆ ನವಮನ್ಮಥಾಕಾರನಾಗಿಯೂ, ಕೆಲವರಿಗೆ ಪೀತಾಂಬರಧಾರಿಯಾಗಿಯೂ, ಕೆಲವರಿಗೆ ಮನೋಹರನಾದ ಮುದ್ದುಕಂದನಾಗಿಯೂ ಕಾಣಿಸಿದನಂತೆ!

ಇಂದುಲೇಖೆ:—(ತನ್ನಲ್ಲಿ) ಏನಿದು, ವಿಚಿತ್ರವಾಗಿರುವುದಲ್ಲಾ! ಒಳ್ಳೆಯದು! ಆಗಲಿ. ಈಗಲೇ ನಾನೂ ನೋಡುವೆನಲ್ಲಾ! ನನಗೆ ಹೇಗೆ ಕಾಣುವನೊ ಅದನ್ನೂ ನೋಡಿ, ತದನಂತರ ಬಾಲಕನ ಮಹಿಮೆಯನ್ನು ನಿಶ್ಚಯಿಸುವೆನು.

ವಸಂತಮಾಲತಿ:—ಯಾರು ಯಾರು ಯಾವ ಯಾವ ಭಾವದಿಂದ ನೋಡಿದರೆ, ಅವರವರಿಗೆ ಆಯಾ ರೂಪದಿಂದಲೇ ಕಾಣಿಸುವನೆಂದು ಬ್ರಹ್ಮವೇತ್ತರಾದ ಗರ್ಗಾಚಾರ್ಯರೇ ಹೇಳಿರುವಾಗ ನೀನು ಪರೀಕ್ಷಿಸಿ ಮಾಡುವುದಾದರೂ ಏನು?

ಇಂದುಲೇಖೆ:—ಒಳ್ಳೆಯದು. ಲತಾಂಗಿಯರೇ! ನಡೆಯಿರಿ, ಹೋಗುವ.

[ಗೋಪಸುಂದರಿಯರೆಲ್ಲರೂ ಯಶೋದಾದೇವಿಯ ಮನೆಗೆ ತೆರಳುವರು.]

ಪ್ರದೇಶ:— ನಂದಗೋಪನ ಮನೆ.

[ಯಶೋದಾದೇವಿಯು ಶ್ರೀಕೃಷ್ಣನನ್ನು ಲಾಲಿಸುತ್ತಿರುವಳು. ಗೋಪವನಿತೆಯರು ಪ್ರವೇಶಿಸಿ, ಯಶೋದೆಗೆ ವಂದಿಸುವರು.]

ಯಶೋದೆ:—ಎಲ್ಲರಿಗೂ ವಂದಿಸುವೆನು. ದಯಮಾಡಿಸಿರಿ. ಇಷ್ಟು ದಿನಕ್ಕೆ ಸಲುವಾಗಿ ಈಗಲಾದರೂ ಬಂದಿರಲ್ಲ! ಇದೇ ನನ್ನ ಪುಣ್ಯೋದಯವು. ಈದಿನವೇ ಸುದಿನವು. ಈಪೀಠಗಳನ್ನಲಂಕರಿಸಿರಿ.

[ಗೋಪಿಯರೆಲ್ಲರೂ ಪೀಠಗಳಮೇಲೆ ಕೂಡುವರು.]

ಇಂದುಲೇಖೆ:—ಅಮ್ಮಾ ಯಶೋದೆ! ನಿನ್ನ ಮುದ್ದು ಕುಮಾರನ ಲಾವಣ್ಯಾತಿಶಯಗಳನ್ನು ಈವರಿವಿಗೂ ಕೇಳಿ ಸಂತೋಷಪಡುತ್ತಿದ್ದೆವು. ಈದಿವಸ ಕಣ್ಣಾರ ನೋಡಿ ಸಂತೋಷಪಡಬೇಕೆಂದು ಬಂದೆವು.

ಕಳಾವತಿ:-ದೇವೀ! ನಿನ್ನ ಮುದ್ದು ಕಂದನೆಲ್ಲಿರುವನು? ಬೇಗನೆ ಕರೆತರಿಸು.

ಚಾರುಮತಿ:—ಯಶೋದಮ್ಮಾ! ನಿನ್ನ ಸುಕುಮಾರನನ್ನು ತೋರಿಸಿ ನಮ್ಮನ್ನು ಸಂತೋಷಪಡಿಸಮ್ಮ!

ಯಶೋದೆ:—ಪಠಾಂಗಿಯರೆ! ನಿಮ್ಮನ್ನು ಸಂತೋಷಪಡಿಸಬೇಕೆಂಬುದೇ ನನ್ನ ಕೋರಿಕೆಯು. ಶ್ರೀಕೃಷ್ಣನನ್ನು ಈಗಲೇ ಕರಿಸುವೆನು.

ವಸಂತಮಾಲತಿ:—ಬೇಗನೆ ಕರಿಸಮ್ಮ!

ಯಶೋದೆ:—ಸಖೀ ಪದ್ಮಿನಿ!

ಪದ್ಮಿನಿ:—ದೇವೀ ಏನಪ್ಪಣೆ?

ಯಶೋದೆ:—ನಮ್ಮ ಕೃಷ್ಣಮೂರ್ತಿಯನ್ನು ಕರೆತಾರಮ್ಮ!

ಪದ್ಮಿನಿ:—ಅಪ್ಪಣೆ.

[ಪದ್ಮಿನಿಯು ಶ್ರೀಕೃಷ್ಣನನ್ನು ಕರೆದು ತರುವಳು. ಶ್ರೀಕೃಷ್ಣನು, ನಾಟ್ಯವಾಡುವಂತೆ ಮೆಲ್ಲ ಮೆಲ್ಲನೆ ಹೆಜ್ಜೆಗಳನ್ನಿಡುತ್ತ ಪ್ರವೇಶಿಸುವನು.]

ಯಶೋದೆ:—ರಾಗ—ಮಧ್ಯಮಾವತಿ—ಆದಿ.

ಬಾರೊಗೋಕುಲಬಾಲಶುಭಲೀಲಾ ॥ ಪಲ್ಲ ॥
ಅಡಿಯಿಡುತಬಿರಬಿರನೆಬಾರೊ ॥ ಅ-ಪ ॥
ವರಗುಣಶೀಲಾ। ಹರಿಕಿಸೆನಿನ್ನನು । ಸರಸಿಜಾಕ್ಷಿಯರುಬಂದಿಹರಯ್ಯ ।
ಸುರುಚಿರಾಕಾರಾ। ಬಾಸುಕುಮಾರಾ। ಕರುಣಾಕರಶಿವರಾಮಾಧಾರಾ ॥ಬಾರೊ॥

[ಶ್ರೀಕೃಷ್ಣನು ಬರುತ್ತಲೇ ಯಶೋದೆಯು ಎತ್ತಿ ಮುದ್ದಾಡುವಳು. ತದನಂತರ ಗೋಪಿಯರೆಲ್ಲರೂ ಮುದ್ದಾಡುವರು.]

ಪದ್ಮಿನಿ:—ದೇವೀ!

ಯಶೋದೆ:—ಏನಮ್ಮಾ ಪದ್ಮಿನಿ!

ಪದ್ಮಿನಿ:—ಯಾರೋ ಒಬ್ಬ ಸುಮಂಗಲಿಯು ಬಂದಿರುವಳು.

ಯಶೋದೆ:—ಆಕೆಯನ್ನು ಮರ್ಯಾದೆಯಿಂದ ಒಳಗೆ ಬರಮಾಡು.

ಪದ್ಮಿನಿ:—ಅಪ್ಪಣೆ.

[ಕಂಸನಿಂದ ಕಳುಹಿಸಲ್ಪಟ್ಟ "ಪೂತನೆ" ಎಂಬ ರಕ್ಕಸಿಯು ಮುತ್ತೈದೆಯಂತೆ ಕಪಟವೇಷವನ್ನು ಧರಿಸಿ ಒಳಗೆ ಪ್ರವೇಶಿಸುವಳು.]

ಯಶೋದೆ:—ಬನ್ನಿರಮ್ಮಾ! ಈ ಪೀಠದಲ್ಲಿ ಕೂಡಿರಿ. ತಮ್ಮ ಸ್ಥಳ ವ್ಯಾವುದು? ಎಲ್ಲಿಂದ ಬಂದಿರಿ?

ಪೂತನೆ:—ಅಮ್ಮಾ-ನನ್ನ ಸ್ಥಳವು ಈಸಮೀಪದಲ್ಲಿಯೇ ಒಂದು ಹಳ್ಳಿಯು. ಪುಣ್ಯಕ್ಷೇತ್ರಗಳನ್ನೂ, ಪುಣ್ಯತೀರ್ಥಗಳನ್ನೂ ಸೇವಿಸಬೇಕೆಂಬ ಕೋರಿಕೆಯಿಂದ ಮಹಾಯಾತ್ರೆಗೆ ಹೊರಟಿರುವೆನು.

ಶ್ರೀಕೃಷ್ಣ:—ಅಮ್ಮಾ! ಈಕೆ "ಮಹಾಯಾತ್ರೆ" ಮಾಡುವುದಕ್ಕಾಗಿ ಇಲ್ಲಿಗೆ ಬಂದಿರುವಳಂತೆ. ಕೇಳಿದೆಯೇನಮ್ಮಾ!

ಪೂತನೆ:—(ಆಶ್ಚರ್ಯದಿಂದ) ಸರಿಯಮ್ಮ! ಈಹುಡುಗನು ಬಹಳ ಚಟುವಟಿಕೆಯುಂಟಾದವನು. ಏನು ತಿಳಿವಳಿಕೆ? ಏನುಕಥೆ? ಇವನು ಯಾರಮಗನಮ್ಮ?

[ಎಂದು ನಟಿಸುತ್ತ ಯಶೋದೆಯು ಕೈಯಲ್ಲಿದ್ದ ಕೃಷ್ಣನನ್ನು ತಾನು ತೆಗದು ಮುದ್ದಾಡುತ್ತ ಕೃಷ್ಣನಿಗೆ ಹಾಲುಕೊಡಲಾರಂಭಿಸುವಳು.]

ಯಶೋದೆ:—ಏನಮ್ಮಾ! ಮಗುವಿಗೆ ಹಾಲು ಕೊಡುವಿರಾ?

ಪೂತನೆ:—ಅಹುದಮ್ಮ!

ಯಶೋದೆ:—ಹಾಗಾದರೆ ಸ್ವಲ್ಪ ಮರೆಯಾಗಿ ಕುಳಿತು ಕೊಡಿರಮ್ಮಾ.

ಪೂತನೆ:—ಯಾತಕ್ಕಮ್ಮ? ಇಲ್ಲಿಯೇ ಕೊಡುವೆನು. ಏನೂ ಭಯವಿಲ್ಲ.

[ಎಂದು ಕೃಷ್ಣನಿಗೆ ಹಾಲು ಕೊಡುವಳು. ಕೃಷ್ಣನು ಪೂತನೆಯ ದೌರ್ಜನ್ಯವನ್ನರಿತು ಆವಳ ಶರೀರದಲ್ಲಿನ ಜೀವಬಲವನ್ನೆಲ್ಲಾ ಹೀರಿಬಿಡುವನು. ಕೂಡಲೇ ಅವಳು ಸಿಡಿಲಿನ ಗರ್ಜನೆಯಂತೆ ಅರಚುತ್ತ ಪರ್ವತಾಕಾರವಾಗಿ ನೆಲಕ್ಕೆ ಬಿದ್ದು ಮೃತಳಾಗುವಳು. ಯಶೋದೆ ಮುಂತಾದವರೆಲ್ಲರೂ ಭಯಭ್ರಾಂತರಾಗಿ ಓಡಿಬಂದು ಬಾಲಕನನ್ನೆತ್ತಿಕೊಳ್ಳುವರು.]

ಯಶೋದೆ:—(ಮಗನನ್ನೆತ್ತಿಕೊಂಡು) ಕಂದಾ! ಕೃಷ್ಣಾ! ಕೃಷ್ಣಾ! (ಎಂದು ತಲೆಸವರುತ, ಗೋಪಿಯರನ್ನು ಕುರಿತು) ನೋಡಿದಿರೇನಮ್ಮಾ! ಎಷ್ಟು ಮೋಸವಾಯಿತು. ಬಾಲಕನನ್ನು ದೇವರೇ ಕಾಪಾಡಿದನು. ನಮ್ಮ ಪುಣ್ಯವು ಚನ್ನಾಗಿದ್ದಿತು. ಈ ಹಾಳು ರಕ್ಕಸಿಯು ಎಲ್ಲಿಂದ ಬಂದಳಮ್ಮ!

ಇಂದುಲೇಖೆ:—ಅಮ್ಮಾ! ದೇವರು ನಮ್ಮ ಭಾಗದಲ್ಲಿರಲಾಗಿ ನಾವು ಗಡ್ಡೆಗೆಬಿದ್ದೆವು.

ಕಳಾವತಿ:—(ಕೃಷ್ಣನ ಮುಖದಲ್ಲಿ ತನ್ನ ಮುಖವನ್ನಿಟ್ಟು) ಹಾ! ಮುದ್ದುಕಂದ! ಭಗವಂತನೇ ನಿನ್ನನ್ನು ಕಾಪಾಡಿದನು.

ಚಾರುಮತಿ:—ಮಾಯಾವಿನಿಯಾದ ಇವಳು ಬಂದಾಗಲೆ ನನಗೆ ಅನುಮಾನವು ತೋರಿತು.

ಭಾನುಮತಿ:—ತಿಳಿದವಳು ಯಾಕೆ ಹೇಳಲಿಲ್ಲ ಮತ್ತೆ?

ವಸಂತಮಾಲತಿ:—ಸರಿಸರಿ! ಇದೆಲ್ಲಾ ಬರಿಯ ಭ್ರಾಂತಿ. ಭೂತ ಭವಿಷ್ಯದ್ವರ್ತಮಾನಗಳನ್ನು ತಿಳಿಯುವುದಕ್ಕೆ ನಾವೇನು ಸರ್ವಜ್ಞರೆ?

ಪದ್ಮಿನಿ:—ಹಾಗೆಲ್ಲಾ ತಿಳಿಯುವಹಾಗಿದ್ದರೆ ನಾವೇ ದೇವತೆಗಳಾಗುತ್ತಿದ್ದೆವು! ಮನುಷ್ಯಮಾತ್ರರಿಗೆ ಅಂತಹ ಪರಿಜ್ಞಾನವೆಲ್ಲಿಯದು?

ಯಶೋದೆ:—ಹೇಗೋ! ದೇವರು ಕಾಪಾಡಿದನು! ಪದ್ಮಿನೀ! ಈ ಪಾಪಿರಕ್ಕಸಿಯ ವಿಚಾರವನ್ನು ಯಜಮಾನರಿಗೆ ತಿಳಿಸು. ಅವರಿದನ್ನು ಹೊರಕ್ಕೆ ಸಾಗಿಸುವರು. ಅಷ್ಟರೊಳಗೆ ನಾವು ಪೂಜಾಗೃಹಕ್ಕೆ ಹೋಗಿ, ಬಾಲಕನಿಗೆ ಭೀತಿ ಪರಿಹಾರಾರ್ಥವಾಗಿ, ರಕ್ಷೆಯಿಡಿಸಿ ಆರತಿ ಎತ್ತುವೆವು.

ಪದ್ಮಿನಿ:—ಹಾಗೆಯೇ ಆಗಲಿ.

[ಎಲ್ಲರೂ ನಿಷ್ಕ್ರಮಿಸುವರು.]

ಪ್ರದೇಶ:— ಮಧುರಾಪುರ

ನಾರದರು:—(ದೇವಕೀವಸುದೇವರನ್ನು ನೋಡಲೆಳಸಿ ಮಧುರಾಪುರಕ್ಕೆ ಬರುವರು).

ನಾರದ:—

ಸೀ॥ ಕಮನೀಯಶುಭಗಾತ್ರಕಂಜಾತದಳನೇತ್ರ, ವಸುಧಾಕಳತ್ರಪಾವನಚರಿತ್ರ। ಸನಕಾದಿಯೋಗೀಂದ್ರಸನ್ನುತಗುಣಧಾಮ। ಪತಿತಪಾವನನಾಮಭಕ್ತಸೋಮ। ವನರುಹಲೋಚನವೈಜಯಂತೀದಾಮ। ಮಕರಕುಂಡಲಕಾಂತಿಮಹಿತಸೀಮ। ಸಕಲಗುಣಾತೀತಸರ್ವಜ್ಞಸರ್ವೇಶ। ನಿಖಿಲಲೋಕಾಧಾರ ನಿರ್ಮಲಾತ್ಮ॥

ಗೀ॥ ಪುಂಡರೀಕಾಕ್ಷಮಹನೀಯಪುಣ್ಯದೇಹ। ದೇವಮುನಿಸನ್ನುತಾಮೋದತೀರ್ಥಪಾದ। ಸತತಶುಭವರ್ತಿನಿರಪಾಯಶಾಂತಮೂರ್ತಿ। ಚಾರುತರಕೀರ್ತಿಲೋಕೈಕಚಕ್ರವರ್ತಿ॥

ಒಮ್ಮೆ ರಾಮನಾಶ್ರಮವಾಗಿದ್ದು, ತದನಂತರ ಶ್ರೀರಾಮಚಂದ್ರನ ತಮ್ಮನಾದ ಶತ್ರುಘ್ನನಿಗೆ ರಾಜಧಾನಿಯಾಗಿದ್ದು, ಈಗ ಶ್ರೀಕೃಷ್ಣಮೂರ್ತಿಗೆ ಜನ್ಮಭೂಮಿಯಾಗಿರುವ ಈ ಮಧುರಾಪುರವು ಪರಮಪವಿತ್ರವಾದುದು. ಭಗವಂತನಾದ ಶ್ರೀಮನ್ನಾರಾಯಣಮೂರ್ತಿಯು, ಕಂಸಾದಿ ದುಷ್ಟರಾಕ್ಷಸರನ್ನು ಸಂಹರಿಸಲೆಳಸಿ ಇಚ್ಛಾಮಾತ್ರವಾದ ದಿವ್ಯ ಶರೀರವನ್ನು ಪರಿಗ್ರಹಿಸಿ, ಈ ಮಹಾಕ್ಷೇತ್ರದಲ್ಲವತರಿಸಿ ಗೋಕುಲದರಸನಾದ ನಂದಗೋಪನಿಗೂ ಯಶೋದಾದೇವಿಗೂ ಸುಕುಮಾರನಾಗಿ ಜನಿಸಿರುವಂತೆ ನಟಿಸುತ್ತ ತನ್ನ, ಅದ್ಭುತ ಲೀಲೆಗಳನ್ನು ತೋರ್ಪಡಿಸುತ್ತಿರುವನು. ಈಗಾಗಲೇ ಪೂತನೆಯೆಂಬ ರಕ್ಕಸಿಯನ್ನು ಸಂಹರಿಸಿ ಯಮಸದನಕ್ಕೆ ಕಳುಹಿಸಿದನು. ಇನ್ನು, ಶಕಟ-ತೃಣಾವರ್ತ-ಧೇನುಕ, ಬಕ-ಪ್ರಲಂಬ-ಕೇಶಿ-ಅಘ-ವ್ಯಾಕ-ಚಾಣೂರ-ಮುಷ್ಟಿಕ-ಮುಂತಾದ ದುಷ್ಟ ಜಂತುಗಳನ್ನು ನಿರ್ಮೂಲ ಮಾಡಿ-ತದನಂತರ, ಲೋಕಕಂಟಕನಾದ ಕಂಸನನ್ನು ಸಂಹರಿಸುವುದಕ್ಕಾಗಿ ರಾಮಕೃಷ್ಣರಿಬ್ಬರೂ ಇಲ್ಲಿಗೆ ಬರುವರು. ಎಲೌ ಮಧುರೆಯೇ! ನೀನೆಷ್ಟು ಪುಣ್ಯಮಾಡಿರುವೆಯೊ!! ನಿನ್ನ ಹೆಸರೇ ಮಧುರವಾಗಿರುವುದು.

ಶ್ಲೋಕ॥ ಅಧರಂಮಧುರಂವದನಂಮಧುರಂ। ನಯನಂಮಧುರಂಹಸಿತಂಮಧುರಂ। ಹೃದಯಂಮಧುರಂಗಮನಂಮಧುರಂ। ಮಧುರಾಧಿಪತೇರಖಿಲಂ ಮಧುರಂ॥

ವಚನಂಮಧುರಂಚರಿತಂಮಧುರಂ। ವಸನಂಮಧುರಂವಲಿತಂಮಧುರಂ। ಚಲಿತಂಮಧುರಂಭ್ರಮಿತಂಮಧುರಂ। ಮಧುರಾಧಿಪತೇರಖಿಲಂ ಮಧುರಂ ॥

ವೇಣುರ್ಮಧುರೋರೇಣುರ್ಮಧುರಃ। ಪಾಣಿರ್ಮಧುರಃಪಾದೌಮಧುರೌ। ನೃತ್ಯಂಮಧುರಂಸಖ್ಯಂಮಧುರಂ। ಮಧುರಾಧಿಪತೇರಖಿಲಂಮಧುರಂ॥

ಗೀತಂಮಧುರಂಪೀತಂಮಧುರಂ। ಭುಕ್ತಂಮಧುರಂಸುಪ್ತಂಮಧುರಂ। ರೂಪಂಮಧುರಂತಿಲಕಂಮಧುರಂ। ಮಧುರಾಧಿಪತೇರಖಿಲಂಮಧುರಂ॥

ಕರಣಂಮಧುರಂತರಣಂಮಧುರಂ। ಹರಣಂಮಧುರಂರಮಣಂಮಧುರಂ! ವಮಿತಂಮಧುರಂಶಮಿತಂಮಧುರಂ। ಮಧುರಾಧಿಪತೇರಖಿಲಂ ಮಧುರಂ ॥

ಗುಂಜಾಮಧುರಾಮಾಲಾಮಧುರಾ। ಯಮುನಾಮಧುರಾವೀಚೀಮದುರಾ। ಸಲಿಲಂಮಧುರಂಕಮಲಂಮಧುರಂಮಧುರಾಧಿಪತೇರಖಿಲಂಮಧುರಂ ॥

ಗೋಪೀಮಧುರಾಲೀಲಾಮಧುರಾ। ಯುಕ್ತಂಮಧುರಂ। ಭುಕ್ತಂಮಧುರಂಇಷ್ಟಂಮಧುರಂಶಿಷ್ಟಂಮಧುರಂ। ಮಧುರಾಧಿಪತೇರಖಿಲಂಮಧುರಂ॥

ಗೋಪಾಮಧುರಾಗಾವೋಮಧುರಾ। ಯಷ್ಟಿರ್ಮಧುರಾಸೃಷ್ಟಿರ್ಮಧುರಾ। ದಲಿತಂಮಧುರಂಫಲಿತಂಮಧುರಂ। ಮಧುರಾಧಿಪತೇರಖಿಲಂ ಮಧುರಂ ॥ *

ಜಗನ್ಮಾತೆಯಾದ ಲಕ್ಷ್ಮಿಯೂ, ಅಮೃತವೂ, ಐರಾವತವೂ, ಉಚ್ಚೈಶ್ರವವೂ, ಕೌಸ್ತುಭಮಣಿಯೂ, ಕಾಮಧೇನುವೂ, ಕಲ್ಪವೃಕ್ಷವೂ, ಚಂದ್ರನೂ, ಅಮೂಲ್ಯರತ್ನಗಳೂ ಯಾವಲ್ಲ ಹುಟ್ಟಿದರೋ ಅಂತಹ ಕ್ಷೀರಸಮುದ್ರದಲ್ಲಿಯೇ ಅತಿಭಯಂಕರವಾದ ಕಾಲಕೂಟ ವಿಷವೂ ಹುಟ್ಟಿದಂತೆ, ಪರಮಪುಣ್ಯಾತ್ಮರಾದ ಋಷಿಮುನಿಗಳಿಗೂ, ಭಗವಂತನ ಅವತಾರಗಳಿಗೂ ಆಶ್ರಯವಾದ ಈ ಮಧುರಾಪುರದಲ್ಲಿ ಮಹಾ ಪಾಪಿಯಾದ ಕಂಸನೂ ಹುಟ್ಟಿರುವನು. ಹುಟ್ಟಿದಮಾತ್ರಕ್ಕೆ ಸಾರ್ಥಕವೇನು? ಜ್ಞಾನಸಂಪನ್ನರಾದ ಸತ್ಪುರುಷರು, ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಲ್ಲಿ, ಧರ್ಮಮೋಕ್ಷ

☞ ಈ ಮಧುರಾಸ್ತೋತ್ರವು ಶ್ರೀವಲ್ಲಭಾಚಾರ್ಯ ವಿರಚಿತವು. ಭಕ್ತಜನರ ಉಪಯೋಗಾರ್ಥವಾಗಿ ಇಲ್ಲಿ ಸಂಗ್ರಹಿಸಲ್ಪಟ್ಟದೆ.

ಗಳನ್ನು ಸಾಧಿಸುವುದಕ್ಕಾಗಿ ಅರ್ಥಕಾಮಗಳನ್ನು ಪರಿತ್ಯಜಿಸುವರು. ಕಂಸ ನಂತಹ ದುರಾತ್ಮರು ಅರ್ಥಕಾಮಗಳನ್ನು ಅನುಭವಿಸುವುದಕ್ಕಾಗಿ ಧರ್ಮ ಮೋಕ್ಷಗಳನ್ನು ಪರಿತ್ಯಜಿಸುವರು. ಕಲ್ಯಾಣಗುಣಪರಿಪೂರ್ಣನಾದ ಭಗವಂತನ ಕಥಾಶ್ರವಣದಿಂದ ಒಂದು ಕ್ಷಣವಾದರೂ ಆನಂದಿಸದಿರುವ ಮೂಢಮನುಷ್ಯರು ಎಷ್ಟುಕಾಲ ಬದುಕಿದ್ದರೂ ಪ್ರಯೋಜನವಿಲ್ಲವು. ಆವ ಪುಣ್ಯಾತ್ಮರು ಸಾಧುಮಾರ್ಗವನ್ನವಲಂಬಿಸಿ ಸತ್ಕಥಾ ಶ್ರವಣದಲ್ಲಿ ಕಾಲ ಕಳೆಯುವರೋ, ಅಂಥವರ ಆಯುಷ್ಯವು ಸಾರ್ಥಕವಾಗುವುದೇ ಹೊರತು, ಮಿಕ್ಕವರ ಆಯುಷ್ಕಾಲವು ನಿರರ್ಥಕವಾದ ಕೇವಲ ಆಹಾರ ನಿದ್ರಾದಿಗಳಲ್ಲಿ ವ್ಯರ್ಥವಾಗಿಕಳೆದುಹೋಗುವುದು. ಷಡ್ಗುಣೈಶ್ವರ್ಯ ಸಂಪನ್ನ ನಾದ ಭಗವಂತನು ಲೀಲಾಮಾನುಷ ಶರೀರವನ್ನು ಪರಿಗ್ರಹಿಸಿ ಶ್ರೀ ಕೃಷ್ಣರೂಪದಿಂದ ಪ್ರತ್ಯಕ್ಷವಾಗಿದ್ದಾಗ್ಯೂ, ಆತನನ್ನು ಪರಾಪರವಸ್ತು ವೆಂದು ತಿಳಿದು ಭಜಿಸತಕ್ಕ ತಿಳಿವಳಿಕೆಯು ಉದ್ಧವ-ಅಕ್ರೂರ ಮುಂ ತಾದ ಕೆಲವರಿಗೆ ಹೊರತು ಮಿಕ್ಕವರಿಗಿಲ್ಲವು. ಪರಂತು ಯಾದವರಲ್ಲಿ ದೇವಕೀವಸುದೇವರೂ, ಗೋಪರಲ್ಲಿ ಯಶೋದಾ ನಂದಗೋಪರೂ, ಪರಮಭಾಗ್ಯಶಾಲಿಗಳು. ಜಗನ್ನಾಥನ ಸೇವೆಯು ಅವರಿಗೆ ಬಹುಸು ಲಭವಾಗಿ ಲಭಿಸಿರುವುದು. ಈ ರಹಸ್ಯವನ್ನರಿಯದೆ ಮದಾಂಧನಾದ ಕಂಸನು ಬಾರಿಬಾರಿಗೂ ದೇವಕೀವಸುದೇವರನ್ನು ಕಾರಾಗೃಹದಲ್ಲಿ ಬಂಧಿಸುತ್ತಿರುವನು. ಇದರಿಂದ ಅವನಿಗೆ ಲೇಶವಾದರೂ ಪ್ರಯೋಜನ ವಿಲ್ಲವಾದಾಗ್ಯೂ, ಸಾಧುಜನರನ್ನು ವೃಥಾ ಪ್ರಯಾಸಗೊಳಿಸಿ, ಪಾಪ ಕ್ಕೆ ಗುರಿಯಾಗುತ್ತಿರುವನಷ್ಟೆ. ಆಗಲಿ! ಇನ್ನೇನು ಮಾಡಬಲ್ಲನು? ದೈವದ್ವೇಷವು ಹೆಚ್ಚಿದಷ್ಟೂ ಅವನ ವಿನಾಶಕಾಲವು ಬಹಳ ಸಮೀಪ ವಾಗುತ್ತಿದೆ. ಈಗ ನಾನು ದೇವಕೀ ವಸುದೇವರ ಬಳಿಗೆಹೋಗಿ ಅವರ ಕ್ಷೇಮಲಾಭಗಳನ್ನು ವಿಚಾರಿಸಿಕೊಂಡು, ಅವರಿಗೆ ಧೈರ್ಯವನ್ನು ಸೂಚಿಸಿ, ಅಲ್ಲಿಂದ ಗೋಕುಲಕ್ಕೆ ತೆರಳುವೆನು.

[ಎಂದು ನಿಶ್ಚಯಿಸಿ ನಾರದರು ದೇವಕೀ ವಸುದೇವರಿರುವ ಸೆರೆ ಮನೆಯನ್ನು ಕುರಿತು ತೆರಳುವರು.]

ಪ್ರದೇಶ:— ಸೆರೆಮನೆ.

ದೇವಕಿ:—ನಾಥಾ! ನಮ್ಮ ಕಷ್ಟದಶೆಗೆ ಪರಿಹಾರವೇ ಇಲ್ಲವಾ ಗಿದೆ! ದುರಾತ್ಮನಾದ ಕಂಸನ ಪ್ರತಾಪವು ನಿರ್ಮೂಲವಾಗುವವರೆಗೂ

ನಮಗೀ ಕಾರಾಗೃಹವಾಸವು ತಪ್ಪಲಾರದು. ಪ್ರಾಣೇಶ್ವರಾ! ಎಂದಿಗಾದರೂ ಈ ಬಂಧನವಿಂದ ಬಿಡುಗಡೆಯಾಗುವ ಪಕ್ಷಕ್ಕೆ, ನಾವೀ ಮಥುರಾಪುರವನ್ನು ಬಿಟ್ಟು ಮತ್ತೆಲ್ಲಿಗಾದರೂ ಹೋಗಬೇಕು. ಕಡೆಗೆ ಸಿಂಹ ಶಾರ್ದೂಲಾದಿ ದುಷ್ಟಮೃಗಗಳಿರುವ ಘೋರಾರಣ್ಯದಲ್ಲಾದರೂ ವಾಸಮಾಡಬಹುದೇ ಹೊರತು ಕ್ರೂರ ಕಿರಾತರಾದ ಮಾನವಪಶುಗಳ ನೆರೆಯಲ್ಲಿ ವಾಸಮಾಡಬಾರದು. ನನ್ನ ಮನಸ್ಸಿಗೆ ಅಷ್ಟು ಬೇಸರಿಕೆಯುಂಟಾಗಿರುವುದು!

ವಸುದೇವ:—ಸಾಧ್ವೀಮಣೀ! ನನ್ನ ಮಾತನ್ನು ಲಾಲಿಸಿಕೇಳು.

ಶ್ಲೋ॥ ಪಾತಾಳೇ ಬ್ರಹ್ಮಲೋಕೇಸುರಪತಿಭವನೇ ಸಾಗರಾಂತೇದಿಗಂತೇ।
ಶೈಲಾಗ್ರೇವಹ್ನಿಮಧ್ಯೇ ಗಹನಹಿಮಗಿರೌ ತೀವ್ರವಜ್ರಾಸಿದುರ್ಗೇ॥
ಭೂಗರ್ಭೇಸನ್ನಿವೇಶೇ ಮದಕರಿಘಟೇಸಂಕಟೇವಾಬಲೇವಾ।
ಸಾವಶ್ಯಮನುಭೋಕ್ತವ್ಯಂ ಕೃತಂಕರ್ಮ ಶುಭಾಶುಭಂ॥

ಪಾತಾಳದಲ್ಲಿಯೂ, ಬ್ರಹ್ಮಲೋಕದಲ್ಲಿಯೂ, ಸ್ವರ್ಗಲೋಕದಲ್ಲಿಯೂ, ಸಮುದ್ರದಾಚೆಯೂ, ಚಕ್ರವಾಳದಲ್ಲಿಯೂ, ಬೆಟ್ಟದಮೇಲೆಯೂ, ಅಗ್ನಿಮಧ್ಯದಲ್ಲಿಯೂ, ಹಿಮಾಲಯದಲ್ಲಿಯೂ, ಮತ್ತೆ ಬೇಕಾದ ಸ್ಥಳದಲ್ಲಿಯೂ, ಮನುಷ್ಯರು ಎಲ್ಲಿದ್ದರೂ ಪೂರ್ವಕರ್ಮವು ಮಾತ್ರ ಬಿಡಲಾರದು. ಸರ್ವದಾ ಹಿಂಬಾಲಿಸುತ್ತದೆ. ಅವರವರು ಮಾಡಿದ ಶುಭಾಶುಭ ಕರ್ಮಗಳಿಗೆ ತಕ್ಕ ಫಲವನ್ನು ಅನುಭವಿಸಿಯೇ ತೀರಬೇಕು. ಪ್ರಾಣೇಶ್ವರೀ! ಭಕ್ತವತ್ಸಲನಾದ ಭಗವಂತನಲ್ಲಿ ದೃಢವಾದ ಭಕ್ತಿಯನ್ನಿಟ್ಟು ನೆಮ್ಮದಿಯಾಗಿರು!

(ಎಂದು ಮಾತನಾಡುತ್ತಿರುವಾಗ್ಗೆ ನಾರದರು ಪ್ರವೇಶಿಸುವರು.)

ವಸುದೇವ:—ತಪೋಧನರಿಗೆ ವಂದಿಸುವೆನು.

ನಾರದ:—ಜಯವಿಜಯೀಭವ!

ದೇವಕಿ:—ಪೂಜ್ಯರಿಗೆ ನಮಸ್ಕರಿಸುವೆನು.

ನಾರದ:—ದೀರ್ಘ ಸುಮಂಗಲೀಭವ!

ವಸುದೇವ:—ಮಹಾತ್ಮರೆ! ತಮ್ಮ ಸಂದರ್ಶನವು ಸಾಮಾನ್ಯವಾಗಿ ಲಭಿಸತಕ್ಕುದಲ್ಲ! ನಾವೀಸೆರೆಮನೆಯಲ್ಲಿದ್ದಾಗ್ಯೂ, ನಮ್ಮ

ಪುಣ್ಯವಶದಿಂದ ತಮ್ಮ ಸಂದರ್ಶನವು ಆಗಾಗ್ಗೆ ಲಭಿಸುತ್ತಿದೆ.' ತಮ್ಮ ಕಾರುಣ್ಯವು ನಮ್ಮ ಪಾಲಿಗೆ ಕಲ್ಪವೃಕ್ಷವಾಗಿ ನಮ್ಮನ್ನು ಸಂತೋಷ ಗೊಳಿಸುತ್ತಿದೆ.

ನಾರದ:—ವಸುದೇವಾ ! ಅಕಾರಣ ಕರುಣಾಪರಾಯಣನಾದ ಶ್ರೀಮನ್ನಾರಾಯಣನೇ ನಿಮ್ಮವಶವರ್ತಿಯಾಗಿರುವಲ್ಲಿ ನನ್ನ ಕಾರುಣ್ಯ ವೇನಿದೆ ? ನಿಮ್ಮ ಧರ್ಮವೇ ನಿಮ್ಮನ್ನು ಕಾಪಾಡುತ್ತದೆ. ಸಜ್ಜನರಿಗೆ ಎಂದೆಂದಿಗೂ ಭಯವಿಲ್ಲವು.

ದೇವಕಿ:—ಪೂಜ್ಯರೆ! ಗೋಕುಲಕ್ಕೆ ಹೋಗಿದ್ದಿರಾ? ಮುದ್ದು ಕುಮಾರನನ್ನು ನೋಡಿದಿರಾ ? ಕ್ಷೇಮವಾಗಿರುವನೆ ?

ನಾರದ:—ಸಾಧ್ವೀಮಣಿಯೆ ! ಅಖಂಡ ಬ್ರಹ್ಮಾಂಡಗಳಿಗೆ ಪ್ರಭು ವಾಗಿ, ಅಖಿಲ ಲೋಕ ರಕ್ಷಕನಾಗಿ, ದುರ್ಜನರನ್ನು ಶಿಕ್ಷಿಸುವುದಕ್ಕಾ ಗಿಯೂ, ಸಜ್ಜನರಿಗೆ ಕ್ಷೇಮವನ್ನುಂಟುಮಾಡುವುದಕ್ಕಾಗಿಯೂ, ಭೂ ಭಾರ ಪರಿಹಾರಾರ್ಥವಾಗಿಯೂ, ಲೀಲಾಮಾನುಷ ಶರೀರವನ್ನು ಪರಿಗ್ರ ಹಿಸಿ, ಯದುಕುಲದಲ್ಲಿ ನಿಮಗೆ ಪುತ್ರನಾಗಿ ಅವತರಿಸಿರುವ ಪರಂಧಾ ಮನನ್ನು ನನ್ನ ಮಾನಸದಲ್ಲಿಯೂ, ಗೋಕುಲದಲ್ಲಿಯೂ, ಪಿಪೀಲಿಕಾದಿ ಬ್ರಹ್ಮ ಪರ್ಯಂತವಾದ ಸಮಸ್ತ ಭೂತಕೋಟಿಯಲ್ಲಿಯೂ, ಸರ್ವದಾ ನೋಡುತ್ತಿರುವೆನು. ಅಮ್ಮಾ! ನಿನ್ನ ಮುದ್ದು ಬಾಲಕನು ಮೂರ್ಲೋಕ ಗಳಿಗೂ ಒಡೆಯನಮ್ಮ !

ಶ್ಲೋ॥ ಅನನ್ಯಾಶ್ಚಿಂತಯಂತೋಮಾಂ । ಯೇಜನಾಃ ಪರ್ಯುಪಾಸತೇ ॥
ತೇಷಾಂನಿತ್ಯಾಭಿಯುಕ್ತಾನಾಂ । ಯೋಗಕ್ಷೇಮಂವಹಾಮ್ಯಹಂ ॥

ಏಕಚಿತ್ತ ಮನೋಭಾವದಿಂದ ತನ್ನನ್ನೇ ನಂಬಿರುವ ಭಕ್ತರ ಯೋಗಕ್ಷೇಮಗಳನ್ನು ತಾನೇ ವಹಿಸತಕ್ಕವನಮ್ಮ ! ದೇವೀ ! ನಿನ್ನ ಮುದ್ದು ಕುಮಾರನು ಕ್ಷೇಮವಾಗಿರುವನಮ್ಮ !

ದೇವಕಿ:—ಪೂಜ್ಯರೇ ! ತಮ್ಮ ಧರ್ಮ ಗುಣವು ಪ್ರಶಂಸನೀಯ ವಾದುದು. ನಮ್ಮಂತಹ ಪಾಮರರನ್ನು ಭವಸಾಗರದಿಂದ ಪಾರು ಮಾಡಿಸಿ ಪರಮಾನಂದ ಪದವಿಗೆ ಮಾರ್ಗವನ್ನು ತೋರಿಸತಕ್ಕ ಕಾರಣ ಗುರುಗಳಾದ ತಾವು ಆಗಾಗ್ಗೆ ದಯಮಾಡಿಸಿ, ನಮ್ಮನ್ನಾದರಿಸಿರುವ

ಅಜ್ಞಾನಾಂಧಕಾರವನ್ನು ಹೋಗಲಾಡಿಸಿ, ಜ್ಞಾನತೇಜವನ್ನು ಪ್ರಕಾಶಗೊಳಿಸಬೇಕಾಗಿ ಪ್ರಾರ್ಥಿಸುವೆನು.

(ಎಂದು ದೇವಕಿಯು ನಾರದರಿಗೆ ನಮಸ್ಕರಿಸುವಳು.)

ನಾರದ:—ಪುಣ್ಯಾತ್ಮಳೇ! ಜ್ಞಾನಾನಂದಮಯನೂ, ಜ್ಞಾನಿಗಳಿಗರಸನೂ, ಆಚಾರ್ಯರಿಗೆಲ್ಲರಿಗೂ ಆಚಾರ್ಯನೂ, ಪರಮಗುರುವೂ ಆದ ಜಗನ್ನಾಥನೇ ನಿನಗೆ ಸುಲಭಸಾಧ್ಯನಾಗಿರುವನಮ್ಮ! ದೇವಕೀ! ನಿನಗೆ ನಿರತಿಶಯಾನಂದವುಂಟಾಗುವುದಮ್ಮ! ಎಷ್ಟೇ ಕಷ್ಟಗಳುಂಟಾದಾಗ್ಯೂ ಹೆದರಬೇಡವಮ್ಮ!

ದೇವಕಿ:—ಆಜ್ಞೆಯನ್ನು ಶಿರಸಾವಹಿಸುವೆನು.

ನಾರದ:—ವಸುದೇವಾ! ಸರ್ವಜ್ಞನಾದ ಭಗವಂತನು ನಿಮ್ಮ ಕಷ್ಟಪರಂಪರೆಗಳನ್ನು ಚನ್ನಾಗಿಬಲ್ಲನು. ಕ್ಷಿಪ್ರದಲ್ಲಿಯೇ ನಿಮ್ಮ ಬಂಧನಗಳೆಲ್ಲವೂ ಪರಿಹಾರವಾಗುವುವು. ಕಷ್ಟಸುಖಗಳನ್ನೆಲ್ಲಾ ಭಗವಂತನಿಗರ್ಪಿಸಿ ನಿಶ್ಚಿಂತರಾಗಿ ಕಾಲಕಳೆಯಿರಿ. ನಿಮಗೆ ಮಂಗಳವಾಗುವುದು.

ದೇವಕೀವಸುದೇವರು:—ಮಹದಾಜ್ಞೆ! (ಎಂದು ಕೈಮುಗಿಯುವರು.)

ನಾರದ:—ನಾನಿನ್ನು ತೆರಳುವೆನು.

(ಎಂದು ನಿಷ್ಕ್ರಮಿಸುವರು.)



## ಚತುರ್ಥಾಂಕಂ—ದ್ವಿತೀಯರಂಗಂ.

### ಪ್ರದೇಶ—ಗೋಕುಲ.

ಯಶೋದಾದೇವಿಯು ಗೋಪಸುಂದರಿಯರೊಡಗೂಡಿ ಶ್ರೀಕೃಷ್ಣನನ್ನು ಉಯ್ಯಾಲೆಯಲ್ಲಿ ಕೂಡಿಸಿ ತೂಗುತ್ತಿರುವಳು.

ಉದ್ಧವನು ಕೃಷ್ಣನ ಸಮೀಪದಲ್ಲಿ ಕುಳಿತಿರುವನು.

ಯಶೋದೆ:— ರಾಗ–ಮೋಹನ ಅಥವಾ ರೇಗುಪ್ತಿ–ಅಟ.

ತೂಗಿರೇಬಾಲನ। ತೂಗಿರೇಕೃಷ್ಣನ। ನಾಗವೇಣಿಯರೆಲ್ಲಾ ತೂಗಿರೇ॥ಪ॥

ರಾಗರಂಜಿತವಾಗಿಹಾಡುತ ನೀವೆಲ್ಲ ಗೋಪಬಾಲನನ್ನುತೂಗಿರೇ ॥ ಅ-ಪ ॥
ನಂದಗೋಕುಲಕೆಆನಂದವಬೀರುವ ಸುಂದರನಿವನನು ತೂಗಿರೇ ॥ ತೂಗಿ ॥
ಭವಹರನಿವಶಿವರಾಮರಕ್ಷಕನು । ನವಪದ್ಮಮುಖಿಯರೆತೂಗಿರೇ॥ ತೂಗಿ ॥



ಗೋಪಿಯರು:—ಅಮ್ಮಾ ಯಶೋದೆ! ಈ ಮುದ್ದುಬಾಲನಿಗೆ ನಿದ್ರೆ ಬಂದಂತೆ ಕಾಣುವುದು ತೂಕಡಿಸುತ್ತಿರುವನು.

ಯಶೋದೆ:—ಲತಾಂಗಿಯರೆ! ನೀವೆಲ್ಲರೂ ಮನೋಹರವಾಗಿ ಜೋಗುಳವನ್ನು ಹಾಡಿರಿ. ಕೃಷ್ಣನನ್ನು ನಿದ್ರೆಗೊಳಿಸೋಣ.

ಗೋಪಿಯರು—ರಾಗ-ಆನಂದಭೈರವಿ-ಆದಿ.

ಜೋಜೋಜೋಕೃಷ್ಣ । ಗೋಪಾಲಕೃಷ್ಣ ॥ ಪ ॥

ಜೋಜೋಯದುಕುಲಬಾಲಾ । ಜೋಜೋಜೋಕೃಷ್ಣ ॥ ಅ-ಪ ॥

ನವಮೋಹನಾಂಗ। ಶುಭಾಂಗಾ। ಯಶೋದಾಕಂದಾ। ಆನಂದಾ। ಸುರುಚಿರಬಾಲಾ। ಸುಂದರಫಾಲಾ । ಕರುಣಾಕರಶಿವರಾಮವಿಲೋಲಾ ॥ ಜೋಜೋ ॥

ಯಶೋದಮ್ಮಾ ! ಈಬಾಲಕನು ನಿದ್ರೆಮಾಡುವಹಾಗೂ ಕಾಣಲಿಲ್ಲ. ಎದ್ದಿರುವಹಾಗೂ ಕಾಣಲಿಲ್ಲ. ಒಮ್ಮೆ ಕಣ್ಣುಮುಚ್ಚಿ ನಿದ್ರಿಸುವಂತೆ ಕಾಣುವನು. ಮತ್ತೊಮ್ಮೆ ಕಣ್ಣು ಬಿಚ್ಚಿ ಎದ್ದಿರುವಂತೆ ಕಾಣುವನು. ಇವನ ಲೀಲೆಗಳು ಅತಿ ವಿಚಿತ್ರವಾಗಿರುವುವು !

ಯಶೋದೆ:—ಕೃಷ್ಣಾ ! ನಿನಗೊಂದು ಕಥೆಯನ್ನು ಹೇಳುವೆನು. ಅದನ್ನು ಕೇಳುತಲಾದರೂ ನಿದ್ರಿಸುವೆಯಾ ?

ಕೃಷ್ಣ:—ಅಮ್ಮಾ ! ಅದೆಂಥಾಕಥೆಯಮ್ಮ !

ಯಶೋದೆ:—ನೋಡಿದೆಯಾ ನಿನ್ನ ಹರಟೆ ! ಕಥೆ ಹೇಳುವೆನೆಂದರೆ ಸುಮ್ಮನೆ ಕೇಳಬೇಕು. ಮಾತುಮಾತಿಗೂ ಪ್ರಶ್ನೆಮಾಡಬಾರದು.

ಕೃಷ್ಣ:—ಅಮ್ಮಾ ! ನೀನೇ ಹೇಳು. ನಾನು ಕೇಳುವ ಕಥೆಯ ಸಾರಾಂಶವು ನನಗೆ ತಿಳಿಯಬೇಕಿಲ್ಲವಮ್ಮ ! ವಿವರವಾಗಿ ಕೇಳುವುದರಲ್ಲಿ ತಪ್ಪೇನಮ್ಮ? ಹಿರಿಯರು ಹೇಳತಕ್ಕ ವಿಷಯಗಳನ್ನು ಚನ್ನಾಗಿ ಕೇಳಿ ಅರ್ಥಮಾಡಿಕೊಳ್ಳಬೇಕು. ಅರ್ಥವಾಗದ ವಿಷಯಗಳನ್ನು ಅವರಿಂದಲೇ ಪುನಃಕೇಳಿ ತಿಳಿದುಕೊಳ್ಳಬೇಕು. ಹಾಗಲ್ಲದೆ, ಹೇಳುವತನಕ ಸುಮ್ಮನೆ ತಲೆಯಾಡಿಸುತ್ತಿದ್ದು, ಹೇಳಿದ ವಿಷಯಗಳಲ್ಲಿ ಒಂದನ್ನಾದರೂ ಗ್ರಹಿಸದಿರುವುದು ಧರ್ಮವೇನಮ್ಮ ? ಅಂಥವರು ಅವಿವೇಕಿಗಳೆನಿಸುವರಲ್ಲವೇನಮ್ಮ ?

ಯಶೋದೆ:—ಕೃಷ್ಣಾ ! ನಾನು ನಿನಗೆ ಕಥೆ ಹೇಳುವೆನೆಂದರೆ, ನೀನೇ ನನಗೆ ಕಥೆ ಹೇಳಲಾರಂಭಿಸಿರುವೆಯಲ್ಲಾ ! ಇಷ್ಟೊಂದು ಮಾತುಗಳನ್ನೆಲ್ಲಿ ಕಲಿತೆಯೋ ಕೃಷ್ಣಾ !

ಕೃಷ್ಣ:—ಅಮ್ಮಾ! ನಾನು ಶ್ರದ್ಧೆಯಿಂದ ಕೇಳುವೆನಮ್ಮ. ಕಥೆಯನ್ನು ನೀನೇ ಹೇಳಮ್ಮ.

ಶ್ಲೋ॥ ರಾಮೋನಾಮಬಭೂವಹುಂತದಬಲಾಸೀತೇತಿಹುಂತೌಪಿತು । ರ್ವಾಚಾ ಪಂಚವಟೀತಟೇವಿಹರತಸ್ತಾಮಾಹರದ್ರಾವಣಃ । ನಿದ್ರಾರ್ಥಂಜನನೀಕಥಾಮಿತಿಹರೇರ್ಹುಂಕಾರತಶ್ಶೃಣ್ವತಃ । ಸೌಮಿತ್ರೇಕ್ವಧನುರ್ಧನುರ್ಧನುರಿತಿವ್ಯಗ್ರಾಗಿರಃಪಾಂತುನಃ ॥ ( ಲೀಲಾಶುಕಃ )

ಯಶೋದೆ:—ಕೃಷ್ಣಾ! ಪೂರ್ವಕಾಲದಲ್ಲಿ ಶ್ರೀರಾಮನೆಂಬ ರಾಜನೊಬ್ಬನಿದ್ದನು.

ಕೃಷ್ಣ:—ಉ!

ಯಶೋದೆ:—ಆ ರಾಜನಿಗೆ ಸೀತೆಯೆಂಬ ಭಾರ್ಯೆ ಇದ್ದಳು.

ಕೃಷ್ಣ:—(ಸ್ವಲ್ಪ ಗಟ್ಟಿಯಾಗಿ) ಊ!

ಯಶೋದೆ:—ಶ್ರೀರಾಮನ ತಂದೆಯು ಹೆಸರು ದಶರಥನು.

ಕೃಷ್ಣ:—ಉ!

ಯಶೋದೆ:—ಆತನಿಗೆ ಕೌಸಲ್ಯೆ, ಕೈಕೆ, ಸುಮಿತ್ರೆಯೆಂಬ ಮೂರುಮಂದಿ ಪತ್ನಿಯರು.

ಕೃಷ್ಣ:—ಊ!

ಯಶೋದೆ:—ದಶರಥನು ರಾಕ್ಷಸರೊಂದಿಗೆ ಯುದ್ಧಮಾಡುವಾಗ ಆತನ ಪತ್ನಿಯಾದ ಕೈಕಾದೇವಿಯು ಮಹಾ ಧೈರ್ಯದಿಂದ ಪತಿಗೆ ತಾನೇ ಸಾರಥಿಯಾಗಿ ರಥವನ್ನು ನಡಿಸಿದಳು. ಆದುದರಿಂದ ರಾಜನಿಗೆ ಜಯವುಂಟಾಯಿತು. ಆತನು ತನ್ನ ಪತ್ನಿಗೆ ಎರಡು "ವರಗಳನ್ನು" ಕೊಟ್ಟನು.

ಕೃಷ್ಣ:—ಊ!

ಯಶೋದೆ:—ಆ ವರಗಳಲ್ಲಿ ಒಂದರಿಂದ ಕೌಸಲ್ಯಾ ಪುತ್ರನಾದ ರಾಮನನ್ನು ಹದಿನಾಲ್ಕು ವರ್ಷಗಳು ಅರಣ್ಯವಾಸಕ್ಕೆ ಕಳುಹಿಸುವಂತೆಯೂ, ಮತ್ತೊಂದರಿಂದ ತನ್ನ ಮಗನಾದ ಭರತನಿಗೆ ರಾಜ್ಯಾಭಿಷೇಕ ಮಾಡಿಸುವಂತೆಯೂ ಕೋರಿದಳು.

ಕೃಷ್ಣ:—ಊ!

ಯಶೋದೆ:—ಶ್ರೀರಾಮನು ಪಿತೃವಾಕ್ಯಪರಿಪಾಲನಾರ್ಥವಾಗಿ, ತನ್ನ ಪತ್ನಿಯಾದ ಸೀತಾದೇವಿಯೊಂದಿಗೂ, ತಮ್ಮನಾದ ಲಕ್ಷ್ಮಣ ನೊಂದಿಗೂ ಕಾಡಿಗೆ ತೆರಳಿದನು.

ಕೃಷ್ಣ:—ಆಮೇಲೆ !

ಯಶೋದೆ:—ಆಮೇಲೆ ಸೀತಾರಾಮಲಕ್ಷ್ಮಣರು ಪಂಚವಟಿ ಯೆಂಬಸ್ಥಳದಲ್ಲಿ ವಾಸಮಾಡುತ್ತಿದ್ದರು.

ಕೃಷ್ಣ:—ಆಮೇಲೆ !

ಯಶೋದೆ:—ಆಗ ರಾವಣನೆಂಬ ರಾಕ್ಷಸನು ಸೀತೆಯನ್ನು ಅಪಹರಿಸಿಕೊಂಡುಹೋದನು.

(ಈಮಾತು ಹೇಳುತ್ತಲೇ ಉಯ್ಯಾಲೆಯಲ್ಲಿ ಮಲಗಿದ್ದ ಕೃಷ್ಣನು ಪ್ರತಾಪದಿಂದ) ಲಕ್ಷ್ಮಣಾ ! ಎಲ್ಲಿರುವೆ ? ಕೋದಂಡವನ್ನಿಲ್ಲಿತಾ! ದುರಾತ್ಮನಾದ ರಾವಣನನ್ನು ಸಂಹರಿಸಿ ಸೀತೆಯನ್ನು ತರುವೆನು!

[ಎಂದು ಮೇಲಕ್ಕೇಳುವನು.]

ಉದ್ಧವ:— ರಾಗ–ಮೋಹನ–ಏಕತಾಳ.

ನಂದತನಯಸುಂದರಾಂಗಸಿಂಧುಗಭೀರಾ ॥ ಪ ॥
ರಾಮನಲ್ಲನೀನೀಗಕೃಷ್ಣನಯ್ಯಶಾಂತನಾಗು ॥ ನಂದ ॥ ಅ–ಪ ॥
ಪರಿಕಿಸುದ್ವಾಪರಯುಗವಿದುಕರುಣಾಕರಪರಮಪುರುಷ । ವರಗೋಕುಲವಿ
ದುಲಾಲಿಸು । ಸಿರಿವರ!ಶಿವರಾಮನುತಾ ॥ ನಂದ ॥

ಪರಮಾತ್ಮನೇ ! ನಿನ್ನ ಮಾಯಾಜಾಲವನ್ನು ತಿಳಿಯಲು ಯಾರು ಸಮರ್ಥರು ? ಗರುಡ, ಗಂಧರ್ವ, ಕಿನ್ನರ, ಕಿಂಪುರುಷ, ಯಕ್ಷ, ರಾಕ್ಷಸ, ನಾಗನಭಶ್ಚರ, ವೈಮಾನಿಕ, ವೈತಾಳಿಕಾದಿಗಳಲ್ಲಿಯೂ, ನರಸುರಾದಿ ಗಳೆಲ್ಲರಲ್ಲಿಯೂ ಸಮಸ್ತ ಭೂತಕೋಟಿಯಲ್ಲಿಯೂ, ಸ್ಥಾವರ ಜಂಗ ಮಾತ್ಮಕವಾದ ಸಮಸ್ತ ಪ್ರಪಂಚದಲ್ಲಿಯೂ ವ್ಯಾಪಿಸಿರುವ ನಿನ್ನ ಮ ಹಿಮೆಯನ್ನರಿಯದೆ, ಮನುಷ್ಯರು ವ್ಯರ್ಥಕಾಲಕ್ಷೇಪದಿಂದ ಪ್ರಮತ್ತ ರಾಗಿರುವರು.

ಸೀ॥ ಧಗಧಗಾಯತವಾದದಾರುಣಸೂರ್ಯನ । ಕಿರಣೋಷ್ಣಮೂಲದಕೀಲುನೀನೆ ।
ಸದಮಲಕಾಂತಿಯಿಂಪರಿದುಪ್ರಕಾಶಿಪ । ಚಂದ್ರಕಿರಣಗಳಸಮಿತಿನೀನೆ ।
ಘನಸುಗಂಧವನೀವವನಪುಷ್ಪಸಮಿತಿಯೊಳ್। ಮಧುರವಾಗಿಹದಿವ್ಯಮಧು

ವುನೀನೆ । ಸರ್ವಕಾಲಗಳಲ್ಲಿಸರ್ವಕಾರ್ಯಗಳಲ್ಲಿ ಸರ್ವತ್ರನೆಲೆದಿಹಸಾಕ್ಷಿನೀನೆ॥
ಗೀ॥ ನಿಖಿಲವಸ್ತುಗಳಲ್ಲಿಯುನಿಬಿಡವಾಗಿ । ಕಾಲದಿಗ್ದೇಶಬಂಧವಿರಹಿತನಾಗಿ।
ದೀಪಿಸುತಲಿರ್ಪೆದೇವನೀಂದಿವ್ಯವಾಗಿ। ಸಾಧುರಕ್ಷಕಶ್ರೀಕೃಷ್ಣಸಾರ್ವಭೌಮ ॥

ಕೃಷ್ಣಾ! ನೀನರಿಯುದ ವಿಷಯುವಾವುದೂ ಇಲ್ಲವಾದರೂ, ಹೆತ್ತ ತಾಯಿಯು ಬಳಿಯಲ್ಲಿ ಮಕ್ಕಳು ತೊದಲು ಮಾತುಗಳನ್ನಾಡುವಂದದಿ ನಿನ್ನ ಸನ್ನಿಧಿಯಲ್ಲಿ ನಾನು ವಿಜ್ಞಾಪಿಸುವೆನಷ್ಟೆ. ದೇವಾ! ಈಗ ತ್ರೇತಾಯುಗವಲ್ಲ, ದ್ವಾಪರಯುಗವು. ಇದು ರಾಮಾವತಾರವಲ್ಲ. ಕೃಷ್ಣಾವತಾರವು. ಸರ್ವಜ್ಞನೇ! ನಿನ್ನ ಲೀಲಾವಿನೋದಗಳ ಮರ್ಮವನ್ನರಿಯಲು ನಾನು ಶಕ್ತನಲ್ಲ. ಬಾಲಗೋಪಾಲಮೂರ್ತೀ! ಪ್ರಸನ್ನನಾಗು!

[ಎಂದು ಉದ್ಧವನು ಸಾಷ್ಟಾಂಗವಾಗಿ ನಮಸ್ಕರಿಸುವನು.]

ಶ್ರೀಕೃಷ್ಣ:—ಉದ್ಧವಾ! ನಿನ್ನ ಮನೋಭಾವವು ನಿಷ್ಕಳಂಕವಾದುದು. ಈ ನನ್ನ ಅವತಾರದಲ್ಲಿ ನಡೆಯಬೇಕಾದ ಕಾರ್ಯಗಳು ಅನೇಕವಾಗಿರುವುವು. ಅವುಗಳಲ್ಲಿ ನಿನ್ನ ಮೂಲಕವಾಗಿ ನಡೆಯಬೇಕಾದ ಪರಮಗೋಪ್ಯವಾದ ಕಾರ್ಯಗಳು ಕೆಲವಿರುವುವು. ಅವುಗಳನ್ನು ಸಮಯೋಚಿತವಾಗಿ ನಿನಗೆ ತಿಳಿಸುವೆನು.

ಉದ್ಧವ:—ಪರಮಾತ್ಮನೇ! ನಿನ್ನ ಆಜ್ಞಾನುಸಾರವಾಗಿ ನಡೆಯಲು ಬದ್ಧನಾಗಿಯೂ, ಸಿದ್ಧನಾಗಿಯೂ ಇರುವೆನು.

ಯಶೋದೆ:—ಉದ್ಧವಾ! ನಿಮ್ಮಿರ್ವರ ಸಂಭಾಷಣೆಯು ಬಹಳ ಗಹನವಾಗಿರುವುದು. ಒಂದು ಮಾತಾದರೂ ನನಗೆ ಪೂರ್ತಿಯಾಗರ್ಥವಾಗಲಿಲ್ಲ. ನೀವೀಗ ಮಾತನಾಡಿದ ವಿಷಯುವೇನು?

[ಎಂದು ಯಶೋದೆಯು ಪ್ರಶ್ನೆಮಾಡುತ್ತಿರುವಾಗ್ಗೆ, ಕಂಸನಿಂದ ಕಳುಹಿಸಲ್ಪಟ್ಟ ಶಕಟಾಸುರನು ಒಂದು ವಿಚಿತ್ರವಾದ "ಬಂಡಿಯರೂಪ" ವನ್ನುಧರಿಸಿ ಪ್ರವೇಶಿಸುವನು.]

ಶ್ರೀಕೃಷ್ಣ:— ರಾಗ-ಮೋಹನ-ಆದಿ.

ಅಮ್ಮಾನಾನೀಬಂಡಿಯೊಳುಕೂಡುವೆನಮ್ಮ । ಯಶೋದಮ್ಮಾನಾನೀ ಬಂಡೀಯೊಳುಕೂಡುವೆನಮ್ಮ ॥ ಪ ॥

ಅವ್ಮಾಲಾಲಿಸವ್ಮಾಇದುರವ್ಯವಾಗಿಶೋಭಿಪುದು।ಸುಮ್ಮನೆನೀನೋಡುತಲಿ ರವ್ಮಾ ಇದನಡಿಸುವೆ ॥ ನವ್ಮಾ ॥ ಅ-ಪ ॥

ಅಮ್ಮಾ! ಈ ಬಂಡಿಯು ಎಷ್ಟು ಚೆನ್ನಾಗಿರುವುದುನೋಡಮ್ಮ! ನಾನಿದರಲ್ಲಿ ಕುಳಿತು ಸವಾರಿ ಮಾಡುವೆನಮ್ಮ.

ಯಶೋದೆ:— ರಾಗ-ಮೋಹನ-ಆದಿ.

ಬೆಡಾಬೇಡವೋಸವಿದುಬೇಡಾಬೇಡವೋ। ಕೃಷ್ಣಬೇಡಾಬೇಡ ॥ ಪ ॥
ಎತ್ತುಕುದುರೇಯಿಲ್ಲದೆ । ಎತ್ತಿಂದಲೊಬಂದಿಹುದು । ಚಿತ್ರವಿದುಬೇಡ ಕೃಷ್ಣ। ಮತ್ತೊಂದನುಕೊಡಿಸುವೆ ॥ ಬೇಡ ॥ ಅ-ಪ ॥

ಕೃಷ್ಣಾ! ಇದು ವಿಚಿತ್ರವಾದ ಬಂಡಿಯು. ಎತ್ತು, ಕುದುರೆ, ಮುಂತಾದ ಯಾವುದೊಂದು ಸಾಧನವೂ ಇಲ್ಲದೆ, ತಾನಾಗಿಯೇ ಬಂದಿರುವುದು. ಇದರಲ್ಲೇನೋ ಮೋಸವಿರಬಹುದು. ಇಲ್ಲವಾದರೆ ಲೋಕದಲ್ಲಿ ಬಂಡಿಗಳು ತಾವಾಗಿಯೇ ನಡೆದುಬರುವುದುಂಟೆ? ನಿನಗೆ ಬೇಕಾದರೆ, ಇದಕ್ಕಿಂತಲೂ ಚನ್ನಾಗಿರುವ ಮತ್ತೊಂದು ಬಂಡಿಯನ್ನು ತರಿಸಿ ಕೊಡುವೆನು. ಇದು ಬೇಡ. ಸುಮ್ಮನಿರು.

ಕೃಷ್ಣ:—ಅಮ್ಮಾ! ಇದೇಕೆ ಹೀಗೆ ಹೇಳುವೆ? ಎತ್ತುಗಳನ್ನೂ ಕುದುರೆಗಳನ್ನೂ ಕಟ್ಟದಿದ್ದರೆ ಬಂಡಿಗಳು ನಡೆಯುವುದಿಲ್ಲವೇನು? ಎತ್ತು ಕುದುರೆ ಮುಂತಾದ ಜಂತುಗಳನ್ನು ಕಟ್ಟಿ ಆ ಬಡಪ್ರಾಣಿಗಳನ್ನು ಹಿಂಸೆಪಡಿಸುವುದಕ್ಕಿಂತಲೂ, ತಾವಾಗಿಯೇ ನಡೆಯುತಕ್ಕ ಬಂಡಿಗಳ ಮೇಲೆ ಸವಾರಿ ಮಾಡುವುದು ಪುಣ್ಯವಲ್ಲವೇನಮ್ಮ! ಅಮ್ಮಾ! ಭೂಮಿಯಮೇಲೆ ನಡಿಸತಕ್ಕ ಬಂಡಿಗಳಿಗೇನೋ ಎತ್ತುಗಳನ್ನೂ ಕುದುರೆಗಳನ್ನೂ ಕಟ್ಟಬಹುದು! ಅಂತರಿಕ್ಷದಲ್ಲಿ ನಡಿಸತಕ್ಕ ಬಂಡಿಗಳಿಗೆ ಯಾವುದನ್ನು ಕಟ್ಟಲಾಗುವುದಮ್ಮಾ!

ಯಶೋದೆ:—ಕೃಷ್ಣಾ! ನಿನ್ನ ಮಾತುಗಳೊಂದೂ ನನಗರ್ಥವಾಗುವುದಿಲ್ಲವು. ಎತ್ತು ಕುದುರೆ ಮುಂತಾದ ಏನನ್ನೂ ಕಟ್ಟದೆ ತಾವಾಗಿಯೇ ನಡೆಯುವುದಾಶ್ಚರ್ಯವಲ್ಲವೇ ಕೃಷ್ಣಾ?

ಶ್ರೀಕೃಷ್ಣ:—ಇದರಲ್ಲಿ ಆಶ್ಚರ್ಯವೇನಿರುವುದಮ್ಮಾ! ಇದೇ ಆಶ್ಚರ್ಯವಾಗುವ ವಕ್ಷಕ್ಕೆ ಈಗ ನಾವೆಲ್ಲರೂ, ಬೇಕಾದಹಾಗೆ ಓಡಾಡುತ್ತಿರು

ವೆವಲ್ಲಾ! ನಮ್ಮನ್ನುಮಾತ್ರ ಎತ್ತು ಕುದುರೆಗಳು ಸೆಳೆಯುತ್ತಿರುವು ವೇನಮ್ಮ ?

ಯಶೋದೆ:—ಕೃಷ್ಣಾ ! ಈವಿಚಿತ್ರಗಳನ್ನು ನಾನೇನುಬಲ್ಲೆನು ?

[ಶ್ರೀಕೃಷ್ಣನು ಬಂಡಿಯಮೇಲೆ ಕುಳಿತು, ತನ್ನ ಕಾಲಿನಿಂದ ಗಟ್ಟಿಯಾಗಿ ಒದೆಯುತ್ತಲೇ ಅದು ಭಯಂಕರಾಕಾರವಾದ ರಾಕ್ಷಸನಾಗಿ ಪರಿಣಮಿಸುವುದು. ಕೃಷ್ಣನು ಅವನೊಂದಿಗೆ ಯುದ್ಧಮಾಡಿ ಅವನನ್ನು ಸಂಹರಿಸುವನು. ಯಶೋದೆ ಮುಂತಾದವರು ಓಡಿಬಂದು ಕೃಷ್ಣನನ್ನೆತ್ತಿಕೊಂಡು ಅಂತಃಪುರದೊಳಗೆ ಪ್ರವೇಶಿಸುವರು.]



## ಚತುರ್ಥಾಂಕಂ—ತೃತೀಯರಂಗಂ.

### ಪ್ರದೇಶ:—ಗೋಕುಲದ ಬೀದಿ.

[ಗೋಪಸುಂದರಿಯರೆಲ್ಲರೂ ಜತೆಗೂಡಿ, ಶ್ರೀಕೃಷ್ಣನಮೇಲೆ ದೂರು ಹೇಳುವುದಕ್ಕಾಗಿ ಯಶೋದೆ ಬಳಿಗೆ ಬರುವರು.]

ರಾಧೆ, ಮಿತ್ರವಿಂದೆ, ನಂದಿನಿ, ಇಂದುಲೇಖೆ, ಭಾನುಮತಿ ಮುಂತಾದವರು ಪ್ರವೇಶಿಸುವರು.

ರಾಧೆ:—ಗೆಳತಿಯರೇ ! ಅಪ್ರಾಕೃತ ದಿವ್ಯಮಂಗಳಸ್ವರೂಪನಾದ ಶ್ರೀಕೃಷ್ಣನನ್ನು ನೋಡಬೇಕೆಂಬ ಕೋರಿಕೆಯು ಬಾರಿಬಾರಿಗೂ ತ್ವರೆಪಡಿಸುತ್ತಿರುವುದು. ನಂದಗೋಪನು ಗೋಕುಲದರಸನಾದುದರಿಂದ ರಾಜಭವನಕ್ಕೆ ಕಾರಣವಿಲ್ಲದೆ ಪದೇಪದೇ ಹೋಗುವುದು ಮರ್ಯಾದೆಯಲ್ಲವು. ಮಹಾರಾಣಿಯಾದ ಯಶೋದಾದೇವಿಯೇನೋ ಪರಮಶಾಂತಚಿತ್ತಳೇ ಆಗುದು. ಆದಾಗ್ಯೂ ಕಾರಣವಿಲ್ಲದೆ ಹೋಗುವುದು ಸರಿಯಲ್ಲ. ಆದುದರಿಂದ ಯಾವುದಾದರೊಂದು ಕಾರಣವನ್ನು ಕಲ್ಪಿಸಬೇಕು. ಹಾಗೆ ಕಲ್ಪಿಸತಕ್ಕ ಕಾರಣವು ಸತ್ಯವಾಗಿರಬೇಕು. ಮತ್ತು ನಮ್ಮ ಸಂಕಲ್ಪವೂ ಸಫಲವಾಗಬೇಕು. ಇದಕ್ಕೆತಕ್ಕ ಕಾರಣವಾವುದು? (ಎಂದು ಸ್ವಲ್ಪಹೊತ್ತು ಯೋಚಿಸಿ) ಸರಿಸರಿ ! ಇದೀಗ ಸರಿಯಾದ ಕಾರಣವು. ಶ್ರೀಕೃಷ್ಣನು ನಮ್ಮೆಲ್ಲರಮನೆಗಳಿಗೂ ಬಂದು ಹಾಲು,

ಮೊಸರು, ಬೆಣ್ಣೆಗಳನ್ನು ತಿಂದುಹೋಗುವನಲ್ಲವೆ! ಇದನ್ನೇ ಒಂದು ಪ್ರಮಾದವಾಗಿ ಕಲ್ಪಿಸಿ ಯಶೋದೆಯೊಂದಿಗೆ ದೂರುಹೇಳಿ, ಈಮೂಲಕವಾಗಿ ಕೃಷ್ಣಾನಂದವನ್ನು ಪಡೆಯೋಣ! ಇದು ಸಮಂಜಸವಾದ ಉಪಾಯವೆಂದು ನನಗೆ ತೋರುತ್ತದೆ! ನೀವೇನುಹೇಳುವಿರಿ?

ಗೋಪಿಯರು:—ರಾಧಾಮಣೀ! ನಿನ್ನ ಬುದ್ಧಿಕುಶಲತೆಯು ಕೊಂಡಾಡತಕ್ಕುದು. ಒಳ್ಳೆಯ ಉಪಾಯವನ್ನೇ ಯೋಚಿಸಿದೆ! ಬಹಳ ಸಮಂಜಸವಾಗಿದೆ! ಹಾಗೆಯೇ ಮಾಡೋಣ!

ರಾಧೆ:—ತೆರಳಿರಿ ಹೋಗುವ!

[ಎಲ್ಲರೂ ನಿಷ್ಕ್ರಮಿಸುವರು.]

ಪ್ರದೇಶ:—ಯಶೋದೆಯ ಮನೆ.

ಯಶೋದೆಯು ಶ್ರೀಕೃಷ್ಣನನ್ನು ಮುದ್ದಾಡುತ್ತಿರುವಳು. ಗೋಪಿಯರು ಪ್ರವೇಶಿಸುವರು.

ಗೋಪಿಯರು:—ರಾಗ—ಶಂಕರಾಭರಣ ಅಥವಾ ಶಹನ—ಏಕತಾಳ.

ಆಹಾಹಾಈಕೃಷ್ಣನಕಾಟವ। ತಡೆಯಲದಾರಿಂದಾಗುವುದು ॥ ಪ ॥
ಓಹೋಹೋಇವನಾಡುವನುಡಿಗಳ। ತಿಳಿಸಲದಾರಿಂದಾಗುವುದೂ ॥ ಆಹಾಹಾ ॥ ಅ—ಪ ॥

ಅನುದಿನಬರುವನುನಮ್ಮಮನೆಗಳಿಗೆ । ಹಾಲುಮೊಸರುಬೆಣ್ಣೆತಿನ್ನುವನು। ತಿನ್ನುತತಿನ್ನುತಚೆಲ್ಲುವನು। ಕಂಡರೆಹಾರುತಲೋಡುವನು ॥ ಆಹಾಹಾ ॥

ಅಮ್ಮಾ ಯಶೋದೆ! ಈಕೃಷ್ಣನ ತುಡುಗುತನವನ್ನು ಸಹಿಸಲು ನಮ್ಮಿಂದಾಗದಮ್ಮ. ಬೆಳಗಾಗುತ್ತಲೇ ಮನೆಮನೆಗೂ ಬರುವನು. ಬಂದರೆ ಸುಮ್ಮನಿರುವನೆ? ಹಾಲು, ಮೊಸರು, ಬೆಣ್ಣೆಗಳನ್ನು ಕದ್ದು ತಿನ್ನುವನು. ತಾನು ತಿನ್ನುವಷ್ಟು ತಿಂದು ಮಿಕ್ಕುದನ್ನು ಕೋತಿಗಳಿಗೆ ತಿನ್ನಿಸುವನು. ಅವು ತಿನ್ನದಿದ್ದರೆ ಕಂಡಹಾಗೆ ಚೆಲ್ಲಾಡುವನು. ಏಕೆಂದು ಕೇಳಿದರೆ ನಸುನಗುತ ಓಡಿಹೋಗುವನು. ಹುಡುಗರನ್ನೆಲ್ಲಾ ಒಂದೆಡೆಗೆ ಸೇರಿಸಿ, ತಾನು ದೊರೆಯೆಂತಲೂ, ಅವರೆಲ್ಲರೂ ಸೇವಕರೆಂತಲೂ ಆಟವಾಡಿಸುವನು. ಯಾರಾದರೂ ಕೇಳಿದರೆ ಕೈಗೆ ಸಿಕ್ಕದೆ

ಓಡಿಹೋಗುವನು. ಯಶೋದಮ್ಮಾ! ಮಗನಿಗೆ ನೀನಾದರೂ ಬುದ್ಧಿ ಹೇಳಬಾರದೇನಮ್ಮ?

ಯಶೋದೆ:— ರಾಗ-ಮಧ್ಯಮಾವತಿ-ಅಟ

ಯಾಕೆದೂರುವಿರಮ್ಮ। ಶ್ರೀಕೃಷ್ಣನುಏನುಮಾಡಿದನಮ್ಮ॥ ಪ ॥
ಶ್ರೀಕರಮೂರ್ತಿಯುಪುಟ್ಟಿದಸಲುವಾಗಿ। ಗೋಕುಲವೀಗಮಂಗಳದಿಶೋಭಿ ಪ್ಪದು ॥ ಯಾಕೆ ॥ ಅ-ಪ ॥

ಮನೆಯೊಳಗಾಡುವನು। ಎಂದಿಗುನೆರಮನೆಗಳಿಗೆಪೋಗನು। ವನಜಲೋಚನೆಯರೆ। ಬರಿದೆದೂರುವಿರೇಕೆ। ಅನುದಿನಶಿವರಾಮದಾಸಪೋಷಕನನ್ನು॥ಯಾಕೆ॥

ಅಮ್ಮಾ ಗೋಪಲತಾಂಗಿಯರೆ! ನಮ್ಮ ಕೃಷ್ಣನು ಯಾವಾಗಲೂ ಮನೆಯಲ್ಲಿಯೇ ಆಡುತ್ತಿರುವನು. ಒಮ್ಮೆಯಾದರೂ ಮನೆಯನ್ನು ಬಿಟ್ಟು ಹೊರಗೆ ಹೋದವನಲ್ಲ. ಮುದ್ದುಬಾಲಕನಾದ ಕೃಷ್ಣನನ್ನು ಸುಮ್ಮನೆ ದೂರುವುದರಿಂದೇನು ಪ್ರಯೋಜನವಮ್ಮ. ಸುಂದರಿಯರೆ! ಕೃಷ್ಣನನ್ನು ಬರಿದೆದೂರಬೇಡಿರಮ್ಮ.

[ಎಂದು ಯಶೋದೆಯು ಗೋಪಿಯರಿಗೆ ಸಮಾಧಾನಹೇಳುವಳು. ಕೃಷ್ಣನು ಏನೂ ಅರಿಯದಂತೆ ಗಂಭೀರವಾಗಿ ಕುಳಿತಿರುವನು.]

ಗೋಪಿಯರು:—ಯಶೋದಮ್ಮಾ! ನೋಡಿದೆಯೋ? ಮನೆ ಮನೆಯಲ್ಲಿಯೂ ಸುಳಿದಾಡುವ "ನವನೀತಮಂಡಿತನು" ನಿನ್ನ ಬಳಿಯಲ್ಲಿ ಏನೂ ಅರಿಯದಂತೆ ಬಹಳ ಸಂಭಾವಿತನಾಗಿ ಕುಳಿತಿರುವ ಸೊಬಗು! ಎಲವೋ ಚೋರಶಿಖಾಮಣೀ!

[ಅಷ್ಟರಲ್ಲಿ ನಾರದರು ಪ್ರವೇಶಿಸುವರು.]

ನಾರದ:—

ಶ್ಲೋ॥ ವ್ರಜೇವಸಂತಂನವನೀತಚೋರಂ। ಗೋಪಾಂಗನಾಮಾನಸಭಾಗ್ಯಚೋರಂ। ಅನೇಕಜನ್ಮಾರ್ಜಿತಪಾಪಚೋರಂ। ಚೋರಾಗ್ರಗಣ್ಯಂಕೃಷ್ಣಂ ನಮಾಮಿ ॥

ಗೋಕುಲವೆಂಬ ಮಧುವನಕ್ಕೆ ವಸಂತನೂ, ಗೋಪಿಯರ ಮನೋಭಾಗ್ಯವನ್ನು ಪಡಿಸಿದವನೂ, ಶರಣಾಗತರ ಅನೇಕಜನ್ಮಾರ್ಜಿತ ಪಾಪ

ಬಂಧನಗಳನ್ನು ಪರಿಹರಿಸುವ ವಿಶ್ವನಾಟಕಸೂತ್ರಧಾರಿಯೂ ಆದ ಕೃಷ್ಣಾ! ನಿನ್ನ ಪಾದಾರವಿಂದಗಳಿಗೆ ವಂದಿಸುವೆನು.

(ಎಂದು ನಾರದರು ಕೃಷ್ಣಮೂರ್ತಿಗೆ ವಂದಿಸುವರು. ಯಶೋದೆ ಮುಂತಾದ ಸ್ತ್ರೀಯರು ನಾರದರಿಗೆ ವಂದಿಸಿ ಅವರಿಂದ ಆಶೀರ್ವಾದವನ್ನು ಪಡೆಯುವರು.)

ಶ್ರೀಕೃಷ್ಣ:—ಎಲೈ ತ್ರಿಲೋಕಸಂಚಾರಿಯೆ! ಪ್ರಪಂಚ ವರ್ತಮಾನ ವಿಶೇಷಗಳೇನು?

ನಾರದ:—ಸರ್ವಜ್ಞನೇ! ಈಗ್ಗೆ ಎರಡು ವಿಶೇಷಗಳು ನಡೆದಿರುವುವು.

ಶ್ರೀಕೃಷ್ಣ:—ಯಾವ ವಿಶೇಷಗಳು?

ನಾರದ:—ಮಾಯಾಕಾಮಿನಿಯಾಗಿ ಬಂದ ಪೂತನೆಯನ್ನು ಯಮಸದನಕ್ಕೆ ಕಳುಹಿಸಿದುದೊಂದು. ಮಾಯಾವಿಯಾದ ಶಕಟಾಸುರನನ್ನು ಮೃತ್ಯುದೇವತೆಗೆ ತುತ್ತುಮಾಡಿದುದೊಂದು.

ಶ್ರೀಕೃಷ್ಣ:—(ನಸುನಗುವನು.)

ನಾರದ:—ಮತ್ತೊಂದು ಈಗ ನಡೆಯುತ್ತಿರುವುದು.

ಶ್ರೀಕೃಷ್ಣ:—ಎಲ್ಲಿ?

ನಾರದ:—ಇಲ್ಲಿಯೇ.

ಶ್ರೀಕೃಷ್ಣ:—ಏನು?

ನಾರದ:—ಗೋಪಲತಾಂಗಿಯರು ನಿನ್ನ ವಿಚಿತ್ರಕಾರ್ಯಗಳನ್ನು ನಿಮ್ಮ ತಾಯೊಂದಿಗೆ ದೂರುಹೇಳುತ್ತಿರುವುದು.

ಯಶೋದೆ:—ನಾರದರೆ! ಈ ಕೃಷ್ಣನ ಚರ್ಯೆಗಳೆಲ್ಲವೂ ಅಪೂರ್ವವಾಗಿರುವುವು. ನನಗೇನೋ ಒಂದಾದರೂ ಗ್ರಾಹ್ಯವಾಗುವುದಿಲ್ಲ. ಅದೇನು ವಿಚಿತ್ರಚರ್ಯೆಗಳೋ ನಾನು ಬೇರೆ ಗ್ರಹಿಸಲಾರೆನು.

ನಾರದ:—ಅಮ್ಮಾ ಯಶೋದೆ! ಬಾಲಗೋಪಾಲನ ಲೀಲಾವಿನೋದಗಳನ್ನು ಕಣ್ಣಾರ ನೋಡುತ, ಕೈಯ್ಯಾರ ಸಲಹುವ ನಿನ್ನ ಪುಣ್ಯವೇಪುಣ್ಯವು. ಈ ಪುಣ್ಯವು ಇಂದ್ರಾದಿ ಬೃಂದಾರಕರಿಗೆ ಸಹ ಲಭಿಸತಕ್ಕುದಲ್ಲ. ನೀನೇ ಧನ್ಯಳು!

[ಎಂದುತ್ತರವಿತ್ತು ಕೃಷ್ಣನನ್ನು ತಿಲಕಿಸುವರು.]

ನಾರದಃ— ವೃತ್ತಂ ॥ ಶ್ರೀರಮಣೀಕಳತ್ರಸರಸೀರುಹಪತ್ರವಿಶಾಲನೇತ್ರಬೃಂ । ದಾರಕವೈರಿಜೈತ್ರ ವರಸಾಧುಜನಾವಳಿಪ್ರೀತಿಪಾತ್ರ ಮಂ । ಜೀರವಿಲಾಸ ಪಾದಯುಗಚಿತ್ರಚರಿತ್ರ ಪುರಾರಿಮಿತ್ರ ವಿಸ್ತಾರವಿನೋದಚೈತ್ರ ಮುರದಾನವ ಭಂಜನತೇನಮೋನಮೋ ॥

ಕೃಷ್ಣಾ ! ಭಕ್ತಜನಮಂದಾರಾ ! ದೀನದಯಾಕರಮೂರ್ತೀ ! ನಾನಿನ್ನು ತೆರಳುವೆನು.

(ಎಂದು ನಾರದರು ಕೃಷ್ಣನಿಗಭಿವಂದಿಸಿ ತೆರಳುವರು.)

ಪ್ರದೇಶ :—ನಂದಗೋಪನ ಅಂತಃಪುರ.

ಯಶೋದೆಯು ಮಕ್ಕಳನ್ನೆಲ್ಲಾ ಭೋಜನಕ್ಕೆ ಕರೆಯುವಳು. ಬಲರಾಮನು ಮುಂತಾದ ಗೋಪಬಾಲಕರು ಕೃಷ್ಣನ ಮೇಲೆ ದೂರು ಹೇಳುವರು.

ಯಶೋದೆ:—ಬಲರಾಮಾ! ಊಟಕ್ಕೆ ಬಾ, ಹೊತ್ತಾಯಿತು.

ಬಲರಾಮ:—ಇಗೋ ಬರುವೆನಮ್ಮ.

ಯಶೋದೆ:—ಕೃಷ್ಣಾ ! ಊಟಮಾಡೇಳು ?

ಕೃಷ್ಣ:—ಅಮ್ಮಾ ! ನನಗೇಕೋ ಹಸಿವಿಲ್ಲವಮ್ಮ.

ಬಲರಾಮ:—ನಿನಗೆ ಹಸಿವೆಲ್ಲಿಂದಬಂದೀತು. ಅಮ್ಮಾ, ಇವನು ಆಟವಾಡುವಾಗ ಸುಮ್ಮನೆ ಮಣ್ಣು ತಿನ್ನುವನಮ್ಮ.

ಯಶೋದೆ:—ಏನು ಏನು! ಮಣ್ಣುತಿನ್ನುವನೆ ?

ಬಲರಾಮ:—ನಿಜವಾಗಿಯೂ ತಿನ್ನುವನಮ್ಮ!

ಯಶೋದೆ:—ಆ ! ಅದು ಹಾಗೆಯೆ ! (ಎಂದು ಕೃಷ್ಣನ ಕೈಹಿಡಿದುಕೊಂಡು) ಎಲಾ ತುಡುಗುಹುಡುಗ! ನಿನಗೆ ಮನೆಯಲ್ಲಿ ಅನ್ನ ವಿಲ್ಲವೇನೊ? ಮಣ್ಣೇಕೆತಿನ್ನುವೆಯೋ ?

ಶ್ರೀ ಕೃಷ್ಣ:—

ಶ್ಲೋ॥ ನಾಹಂಭಕ್ಷಿತವಾನಂಬ । ಸರ್ವೇ ಮಿಥ್ಯಾಭಿಶಂಸಿನಃ । ಯದಿಸತ್ಯಗಿರಸ್ತರ್ಹಿ । ಸಮಕ್ಷಂಪಶ್ಯಮೇಮುಖಂ ।

ಅಮ್ಮಾ ! ಇಲ್ಲವಮ್ಮ. ನಾನು ಮಣ್ಣು ತಿನ್ನಲಿಲ್ಲವಮ್ಮ. ಇವರೆಲ್ಲರೂ ಅಬದ್ಧಗಾರರು. ನನ್ನಮೇಲೆ ಬೇಕೆಂದು ಸುಳ್ಳುಹೇಳುವರು. ಬೇಕಾದರೆ ನನ್ನಬಾಯನ್ನು ಪರೀಕ್ಷಿಸಿನೋಡಮ್ಮ.

ಯಶೋದೆ:—ಎಲ್ಲಿ! ನಿನ್ನ ಬಾಯನ್ನು ತೆರೆ?

ಶ್ರೀ ಕೃಷ್ಣ:—ನೋಡಮ್ಮ! (ಎಂದು ಬಾಯನ್ನು ತೆರೆವನು.)

ವಿಶ್ವರೂಪ ಸಂದರ್ಶನ.



(ಯಶೋದೆಗೆ ಶ್ರೀಕೃಷ್ಣನಬಾಯಲ್ಲಿ ಸಮಸ್ತ ಪ್ರಪಂಚವೂ ಕಾಣಿಸುವುದು. ಅದ್ಭುತ ಪ್ರಮೋದ ಮಗ್ನಳಾದ ಯಶೋದೆಯು ತನ್ನಲ್ಲಿ ವಿತರ್ಕಿಸುವಳು.)

ಮ॥ ಕನಸೋ ವೈಷ್ಣವಮಾಯೆಯೋ! ಇತರ ಸಂಕಲ್ಪಾರ್ಥವೋ! ಸತ್ಯವೋ।
ಘನಸೂರ್ಯಾಗ್ನಿ ಶಶಾಂಕತಾರಕಮಹಾ ಕೂರ್ಮಾಹಿಭೂತಾದಿಗಳ್ । ಮುನಿ
ಗಂಧರ್ವ ಚರಾಚರಾದಿ ಭುವನಂಗಳ್ ತೋರ್ಪವೀಮೂರ್ತಿಯೊಳ್ ।
ಮನವಿಭ್ರಾಂತಿಯೊ ಕಾಣೆನಾಂ ವರಯಶೋದಾದೇವಿಯೋ ಅಲ್ಲವೋ ॥

ಆಹಾ! ಇದೇನಾಶ್ಚರ್ಯ! ಇದೇನದ್ಭುತ! ಏನಿದು! ಈ ಬಾಲಕನ ಬಾಯಲ್ಲಿ ಸಕಲ ಚರಾಚರಪ್ರಪಂಚವೂ ಕಾಣಿಸುತ್ತಿರುವುದಲ್ಲಾ! ಚರಾಚರ ಭೂತಕೋಟಿಯೂ, ಅಂತರಿಕ್ಷವೂ, ದಿಕ್ಕುಗಳೂ, ಬೆಟ್ಟಗಳೂ, ದ್ವೀಪಗಳೂ, ಸಮುದ್ರಗಳೂ, ಭೂಮಂಡಲವೂ, ವಾಯುವೂ, ಅಗ್ನಿಯೂ, ಸೂರ್ಯಚಂದ್ರ ನಕ್ಷತ್ರಾದಿಗಳೂ, ಸ್ವರ್ಗಾದಿ ತೇಜೋ

ಲೋಕಗಳೂ, ಅತಲಾದಿ ಅಧೋಲೋಕಗಳೂ, ಸತ್ವರಜಸ್ತಮೋ ಗುಣಗಳೂ, ಗರುಡ ಗಂಧರ್ವ ಕಿನ್ನರ ಕಿಂಪುರುಷಾದಿ ಸಮಸ್ತ ದೇವ ರಾಕ್ಷಸ ಮನುಷ್ಯಾದಿ ಸೃಷ್ಟಿಯೂ, ಎಲ್ಲವೂ ಈತನ ಬಾಯಲ್ಲಿಯೇ ಕಾಣುವುದಲ್ಲಾ! ಇದೇನು ಕನಸಾಗಿರಬಹುದೆ? ಅಲ್ಲ! ಕನಸಲ್ಲ! ನಾನು ಎಚ್ಚರವಾಗಿಯೇ ಇರುವಲ್ಲಿ ಕನಸೆಲ್ಲಿಂದಬಂದೀತು? ಇದೇನು ವಿಷ್ಣು ಮಾಯೆಯೋ? ಅದೂ ಅಲ್ಲ. ಮಾಯೆಯಾಗಿದ್ದರೆ ಇಲ್ಲಿರುವ ಯಾರಿಗೂ ಕಾಣದೇ ನನಗೊಬ್ಬಳಿಗೆ ಮಾತ್ರವೇ ಕಾಣಿಸುವುದೇಕೆ? ಅಥವಾ ಮನಸ್ಸಿನ ಕಳವಳವೆ? ಅಲ್ಲ, ಕಳವಳವೂ ಅಲ್ಲ. ಮನಸ್ಸು ನಿರ್ಮಲವಾಗಿಯೇ ಇದೆ. ಯಾರ ಬಾಯೊಳಗೆ ಈ ವಿಚಿತ್ರವೆಲ್ಲವೂ ಕಾಣುವುದೋ ಆ ಶ್ರೀ ಕೃಷ್ಣನೂ ಕೂಡ ಅಲ್ಲಿಯೇ ಕಾಣಬರುತ್ತಿರುವನಲ್ಲಾ! ಒಳಗೂ ಹೊರಗೂ ಒಂದೇ ವಿಧವಾಗಿ ಸಮಸ್ತ ಪ್ರಪಂಚವೂ ಈತನಲ್ಲಿ ಕಾಣಿಸುವುದಲ್ಲಾ! ಒಂದುವೇಳೆ ಈ ಕೃಷ್ಣನಲ್ಲಿಯೇ ಗುಪ್ತವಾದ ಮಹಿಮೆ ಏನಾದರೂ ಇರಬಹುದೆ? ಇದ್ದರೂ ಇರಬಹುದು! ಆಹಾ! ಈತನು ಸಾಕ್ಷಾದ್ಭಗವಂತನೇ ಹೊರತು ಬೇರಲ್ಲ! (ಎಂದು ನಿಶ್ಚಯಿಸಿಕೊಂಡು ಶ್ರೀ ಕೃಷ್ಣನ ವಿಶ್ವರೂಪವನ್ನು ಕುರಿತು ಹೀಗೆಂದು ಬಣ್ಣಿಸುವಳು.)

ದಂಡಕಂ:—ಶ್ರೀಮಾನಿನೀ ಮಾನಸಾಂಭೋಜಮಿತ್ರಾ। ಮುನಿಸ್ತೋತ್ರಪಾತ್ರಾ। ಸುರೇಂದ್ರಾದಿ ಬೃಂದಾರಕವ್ರಾತಸಂಸೇವಿತಾನಂದಗಾತ್ರಾ। ಮಹಾದೇವ ಗೋವಿಂದ ನಾರಾಯಣಾಧೋಕ್ಷಜಾವಾಮನಾ! ವಾಸುದೇವಾ! ಹೃಷೀಕೇಶ ದಾಮೋದರಾ! ವಿಶ್ವನಾಥಾಚ್ಯುತಾನಂತ ಶ್ರೀಪದ್ಮನಾಭಾಮುಕುಂದಾ। ಸದಾನಂದ ಸಂದೋಹ ಶ್ರೀವತ್ಸಕೇಯೂರ ಮಾಣಿಕ್ಯವೈಡೂರ್ಯ ಸಂಕೀರ್ಣ ಸೌವರ್ಣ ಹಾರಾವಳೀ ಭೂಷಣಾಲಂಕೃತಾಪಾರಶೋಭಾಯಮಾನಾ। ಗದಾಶಂಖಚಕ್ರಾದಿ ದಿವ್ಯಾಯುಧಾಕೀರ್ಣ ರಾರಾಜಿತೋದ್ದಂಡ ಹಸ್ತಪ್ರಶಸ್ತಾ। ಮಹಾಭೀಷಣಾಕಾರದಾರ್ಜನ್ಯಸಂಘಾತದುಷ್ಕ್ರಿಯಾಸಕ್ತ ದೈತ್ಯಾನ್ವಯಾನೇಕ ಕಂಠಾವಳೀ ಲುಂಠನೋತ್ಕಂಠ ವೈಕುಂಠವಾಸಾ। ಸುಧೀಪೋಷ। ಕಾರುಣ್ಯದಾಕ್ಷಿಣ್ಯ ಸತ್ಯಕ್ಷಮಾಮೋದಶಾಂತಾದಿ ಸದ್ಧರ್ಮ ಭೂಷಾ। ಜಿಗೀಷಾ। ಅನನ್ಯಾಶ್ರಿತಾಶೇಷ ಗೋಪಾಂಗನಾತೋಷ। ಫಿರ್ದೋಷ ನಿರ್ಲಿಪ್ತತೇಜೋವಿಶೇಷಾ। ಪ್ರಪಂಚಾರ್ಥ ವೇದಾರ್ಥ ನಿಶ್ಯಾರ್ಥ ಸತ್ಯಾರ್ಥ ಸಂಪೂರ್ಣ ಸಂಭಾವ್ಯ ಲೀಲಾವಿನೋದಾ। ಸನಂದಾದಿ ಯೋಗೀಂದ್ರ ಚಿತ್ತಾಬ್ಜ ಸಿಂಹಾಸನಾಸೀನಲೋಲಾ। ದಯಾಶೀಲ ಗೋಪಾಲಬಾಲಾ। ಹರೇ ಕೃಷ್ಣ ತುಭ್ಯಂ ನಮೋಕೃಷ್ಣ ಕೃಷ್ಣಾ ನಮಸ್ತೇ ನಮಸ್ತೇನಮಃ॥

ಶ್ಲೋ॥ ಅಥೋಯಥಾವನ್ನವಿತರ್ಕ ಗೋಚರಂ, ಚೇತೋಮನಃಕರ್ಮವಚೋಭಿರಂಜಸಾ। ಯದಾಶ್ರಯಂಏನಯತಃಪ್ರತೀಯತೇ, ಸದುರ್ವಿಭಾವ್ಯಂ ಪ್ರಣತಾಸ್ಮಿತತ್ಪದಂ॥

ಅಹಂಮಮಾಸೌಪತಿರೇಷಮೇಸುತೋ ವ್ರಜೇಶ್ವರಸ್ಯಾಖಿಲವಿತ್ತಪಾಸತೀ। ಗೋಪ್ಯಶ್ಚ ಗೋಪಾಸ್ಸಹಗೋಧನಾಶ್ಚ, ಯನ್ಮಾಯಯೇತ್ಥಂ ಕುಮತಿಸ್ಸಮೇಗತಿಃ॥

ಯಾವಾತನನ್ನು ಬುದ್ಧಿಯಿಂದಾಗಲಿ, ಮನಸ್ಸಿನಿಂದಾಗಲಿ, ಕರ್ಮಗಳಿಂದಾಲಿ, ವಾಕ್ಕಿನಿಂದಾಗಲಿ ಯಥಾರ್ಥವಾಗಿ ತಿಳಿಯಲಾಗದೋ, ಈ ಪ್ರಪಂಚವೆಲ್ಲವೂ ಯಾವಾತನನ್ನು ಆಶ್ರಯಿಸಿರುವುದೋ, ಚಕ್ಷುವೇ ಮೊದಲಾದ ಇಂದ್ರಿಯಗಳಿಗೆ ಕಾರಣನಾಗಿಯೂ, ಚಿತ್ತವೃತ್ತಿಗಳಿಗೆ ಅಭಿವ್ಯಕ್ತನಾಗಿಯೂ ಇರುವ ಯಾವಾತನಿಂದ ಸಮಸ್ತವೂ ಪ್ರಕಾಶಿತವಾಗಿರುವುದೋ, ಅಂತಹ ವಾಚಾಮಗೋಚಾರನಾದ ಭಗವಂತನಿಗೆ ನಮಸ್ಕರಿಸುವೆನು. "ಈತನು ನನ್ನ ಪತಿಯು, ಇವನು ನನ್ನ ಮಗನು, ನಾನು ಗೋಕುಲದ ಅರಸನಾದ ನಂದಗೋಪನ ಸತಿಯು, ಈ ಗೋಪಾಲಕರೂ ಗೋಪಿಯರೂ ಗೋವುಗಳೂ ಮುಂತಾದವರೆಲ್ಲರೂ ನನ್ನವರು, ನಾನು ಸಕಲೈಶ್ವರ್ಯಸಂಪನ್ನಳು, ನಾನು ಮಹಾ ಸಾಧ್ವೀಮಣಿಯು ಎಂಬೀ ವಿಧವಾದ ಅಹಂಕಾರ ಮಮಕಾರ ರೂಪವಾದ ಭೇದ ಬುದ್ಧಿಯುಂಟಾಗಿರುವುದಕ್ಕೆ ಯಾವಾತನಮಾಯೆಯೇ ಕಾರಣವಾಗಿರುವುದೋ ಅಂತಹ ಸರ್ವತಂತ್ರ ಸ್ವತಂತ್ರನಾದ ಭಗವಂತನೇ ನನ್ನನ್ನು ಕಾಪಾಡಲಿ। ಓ ಭಗವಂತನೇ। ಪರಮ ಕಾರುಣ್ಯಮೂರ್ತಿಯೇ! ಆಶ್ರಿತವತ್ಸಲನೇ! ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನೇ! ಅನಂತಕಲ್ಯಾಣಗುಣ ಪರಿಪೂರ್ಣನೇ! ವಿಶ್ವರೂಪನೇ! ವಿಶ್ವಾತ್ಮಕನೇ! ವಿಶ್ವನಾಥನೇ! ವಿಶ್ವಸಂರಕ್ಷಕನೇ! ವಿಮಲಚಾರಿತ್ರನೇ! ವೇದಾಂತ ಸ್ವರೂಪನೇ! ವೇಣುಗೋಪಾಲನೇ! ಕೃಷ್ಣಾ! ಕೃಷ್ಣಾ!! ಕೃಷ್ಣಾ!!! (ಎಂದು ಧ್ಯಾನಮಾಡುತ್ತಾ ಯಶೋದಾದೇವಿಯು ಶ್ರೀ ಕೃಷ್ಣನ ಬಾಯನ್ನು ಮತ್ತೊಂದುಸಾರಿ ನೋಡುವಾಗ್ಗೆ ಆಕೆಗೆ ಎಂದಿನಂತೆಯೇ ಶ್ರೀ ಕೃಷ್ಣನ ಮುದ್ದುಮೊಗವುಮಾತ್ರವೇ ಕಾಣಿಸುವುದು. ಆಕೆಯದನ್ನು ನೋಡಿ ಆಶ್ಚರ್ಯಚಕಿತಳಾಗಿ, ಏನುಹೇಳುವುದಕ್ಕೂ ತೋಚದೆ ಅದರ ಕಾರಣವನ್ನು ತಿಳಿಯಲೆಳಸಿ ಶ್ರೀ ಕೃಷ್ಣನನ್ನೇ ಕೇಳುವಳು.)

ಯಶೋದೆ:—ಕೃಷ್ಣಾ! ಈಗ ನಿನ್ನ ಬಾಯಲ್ಲಿ ಸಮಸ್ತ ಪ್ರಪಂಚವೂ ಕಾಣಿಸಿತಲ್ಲಾ! ಅದೇನು ಮಹಿಮೆಯೋ?

ಶ್ರೀ ಕೃಷ್ಣ:—ಅಮ್ಮಾ! ನೀನೆಲ್ಲಿಯೋ ಕನಸುಕಂಡಿರಬಹುದು! ಸಮಸ್ತ ಪ್ರಪಂಚಗಳೆಂದರೇನು? ನನ್ನ ಬಾಯಲ್ಲಿ ಕಾಣಿಸುವುದೆಂದರೇನು? ಇದೆಲ್ಲವೂ ನಿನ್ನ ಭ್ರಾಂತಿಯಲ್ಲದೆ ಬೇರೊಂದಲ್ಲವಮ್ಮಾ!

ಯಶೋದೆ:—ಅದುಹೋಗಲಿ, ಈ ನಂದಗೋಕುಲದ ಹಿರಿಯರು ಕಿರಿಯರೆಲ್ಲರೂ ನಿನ್ನನ್ನು ಕುರಿತು ಏನೇನೋ ವಿಚಿತ್ರಗಳು ಹೇಳಿಕೊಳ್ಳುವರಲ್ಲಾ! ಅದೇನು ಮಹಿಮೆಯೋ?

ಶ್ರೀ ಕೃಷ್ಣ:—ಅಮ್ಮಾ! ಲೋಕದಲ್ಲಿ ಜನರು ತಮ ತಮಗೆ ತೋಚಿದಹಾಗೆಲ್ಲಾ ಹೇಳಿಕೊಳ್ಳುವರು. ಜನರ ಹೇಳಿಕೆಗೆ ಮೇರೆಯುಂಟೇನಮ್ಮಾ?

ಯಶೋದೆ:—ಅದುಸರಿ! ಗಾರ್ಗ್ಯಾದಿ ಮಹರ್ಷಿಗಳೆಲ್ಲರೂ ನಿನ್ನನ್ನು ಭಗವಂತನೆಂದು ಸ್ತೋತ್ರಮಾಡುವರಲ್ಲಾ! ಅದರ ವಿವರವೇನೋ?

ಶ್ರೀ ಕೃಷ್ಣ:—ಅಮ್ಮಾ! ಅವರಿಗೆ ಮಾಡುವುದಕ್ಕೆ ಬೇರೆ ಕೆಲಸವಾವುದಾದರೂ ಇದ್ದರಲ್ಲವೆ! ಕುಂತೆಡೆಯಲ್ಲಿ ಏನಾದರೂ ಒಂದು ಕವಿತ್ವಮಾಡುತ್ತಿರುವುದೇ ಅವರ ಸ್ವಭಾವವಮ್ಮಾ!

ಯಶೋದೆ:—ಆಗಲಿ! ಇತರರ ಮಾತೇ ಬೇಡ. ಈಗ ನಾನೇ ನಿನ್ನ ಬಾಯಲ್ಲಿ ಸಕಲ ಲೋಕಗಳನ್ನೂ ನೋಡಿದೆನಲ್ಲಾ! ಅದೂ ಸುಳ್ಳೇನೊ?

ಶ್ರೀಕೃಷ್ಣ:—ಅಮ್ಮಾ! ನೀನೆಷ್ಟು ಭ್ರಾಂತಚಿತ್ತಳು! ನಿನ್ನಂತಹ ಹುಚ್ಚುತಾಯಿಯನ್ನು ನಾನೆಲ್ಲಿಯೂ ನೋಡಿಲ್ಲವಮ್ಮಾ!

ಯಶೋದೆ:—(ಕಳವಳದಿಂದ) ಏನು ಕೃಷ್ಣಾ! ನಾನು ಸುಳ್ಳು ಹೇಳುವೆನೇನೊ?

ಶ್ರೀ ಕೃಷ್ಣ:—ಸುಳ್ಳಲ್ಲವಮ್ಮಾ! ಒಂದೊಂದುವೇಳೆ ಮನಸ್ಸಿಗೆ ಕಳವಳವಾಗುವುದೂ ಉಂಟಮ್ಮಾ!

ಯಶೋದೆ:—(ಸಂಭ್ರಮದಿಂದ ಶ್ರೀಕೃಷ್ಣನನ್ನಾಲಿಂಗಿಸಿಕೊಂಡು) ಮುದ್ದುಗೋಪಾಲಾ! ಏನು ಕಲಿತಿರುವೆಯೋ? ನಿನ್ನ ವಿಚಿತ್ರ

ಗಳು ನಿನಗೇ ಗೋಚರವಲ್ಲದೆ ನನ್ನಂತಹ ಪಾಮರರಿಗೆ ತಿಳಿಯು ಲಾರದು ಕೃಷ್ಣ! ಯಾವ ಜನ್ಮದ ಪುಣ್ಯಫಲದಿಂದ ನನಗೆ ನೀನು ಪುತ್ರನಾಗಿ ಹುಟ್ಟಿದೆಯೋ, ನನ್ನ ಭಾಗ್ಯವೇ ಭಾಗ್ಯವು! ಕಾರುಣ್ಯಶೀಲ! ಕರುಣಾಲವಾಲ !! ಗೋಪಾಲಬಾಲ !!!

(ಎಂದು ಮುದ್ದುಕೃಷ್ಣನನ್ನು ಯಶೋದಾದೇವಿಯು ಆಲಿಂಗನ ಮಾಡಿಕೊಂಡು ಬ್ರಹ್ಮಾನಂದದಲ್ಲಿ ಮಗ್ನಳಾಗುವಳು.)



ಯಶೋದೆಯು, ಪೂರ್ಣಚಂದ್ರಿಕೆಯೆಂಬ ಆಕಳಿನಲ್ಲಿ ಹಾಲು ಕರೆದು ಶ್ರೀ ಕೃಷ್ಣನಿಗೆ ಕೊಡುವಳು. ಶ್ರೀಕೃಷ್ಣನು ಹಾಲು ಕುಡಿ ಯುತ್ತ ಬೀದಿಗೆ ಬರುವನು. ಉದ್ಧವನು ಶ್ರೀಕೃಷ್ಣ ಸಂದರ್ಶನ ಕ್ಕಾಗಿ ಬರುವನು.

14

ರಾಗ—ಮೋಹನ—ಜಂಪೆ.

ಶ್ರೀಕೃಷ್ಣ:—ಪಾಲ್ಬೆಣ್ಣೆಗಳು ನನ್ನ ಪಾಲು !
ಉದ್ಧವ:— ಏಕೆ ಗೋಕುಲವೇ ನಿನ್ನ ಪಾಲು !
ಶ್ರೀಕೃಷ್ಣ:—ಗೋಪಾಲಕರಿಗೆ ನಾನರಸ !
ಉದ್ಧವ:— ಏಕೆ ಬ್ರಹ್ಮಾಂಡಗಳಿಗೆ ನೀನರಸ !
ಶ್ರೀಕೃಷ್ಣ:—ನಂದಗೋಪಗೆ ನಾನು ಕಂದ !
ಉದ್ಧವ:— ಆಹಾ ಇಂದಿರಾರಮಣಗೋವಿಂದ !
ಶ್ರೀಕೃಷ್ಣ:—ಗೋವುಗಳ ನಾನು ಪಾಲಿಸುವೆ !
ಉದ್ಧವ:—ಏಕೆ ಬ್ರಹ್ಮಾದಿಗಳನೆ ಪಾಲಿಸುವೆ !

(ಉದ್ಧವನು ಕೃಷ್ಣನಿಗೆ ಸಾಷ್ಟಾಂಗ ನಮಸ್ಕಾರವನ್ನಾಚರಿಸುವನು.

ಶ್ರೀ ಕೃಷ್ಣ —ಉದ್ಧವಾ ! ನೀನು ನನ್ನಂತರಂಗವನ್ನರಿತವನು. ಈಗೋಕುಲದಲ್ಲಿ ಕೆಲವರು ನನ್ನನ್ನು ಪುತ್ರನೆಂತಲೂ, ಕೆಲವರು ಅಳಿಯನೆಂತಲೂ, ಕೆಲವರು ಭಾವನೆಂತಲೂ, ಹಲವರು ಅಣ್ಣನೆಂತಲೂ, ಕೆಲವರು ತಮ್ಮನೆಂತಲೂ ಭಾವಿಸುವರು. ನೀನೂ, ಅಕ್ರೂರನೂ, ಗೋಪಿಯರೂ, ರಾಧೆಯೂ ನನ್ನಂತರಂಗವನ್ನು ಚೆನ್ನಾಗಿ ತಿಳಿದಿರುವಿರಿ.

ಉದ್ಧವ:—ಷಡ್ಗುಣೈಶ್ವರ್ಯ ಸಂಪನ್ನನಾದ ಭಗವಂತನೇ! ನಿನ್ನ ಅಂತರಂಗವನ್ನು ಚೆನ್ನಾಗಿ ತಿಳಿಯಲು ಯಾರಿಗೆ ಸಾಧ್ಯವು ?

ಶ್ರುತಿ॥ ಯತೋವಾಚೋನಿವರ್ತಂತೇ ಅಪ್ರಾಪ್ಯಮನಸಾಸಹಾ॥ ಎಂತಲೂ,
" ಯತೋವಾಇಮಾನಿಭೂತಾನಿಜಾಯಂತೇ । ಏನಜಾತಾನಿಜೀವಂತಿ ಯತ್ಪ್ರಯಂತ್ಯಭಿಸಂವಿಶಂತಿತದ್ವಿಜಿಜ್ಞಾಸಸ್ವ ತದ್ಬ್ರಹ್ಮ॥

ಎಂತಲೂ, ಶ್ರುತಿವಚನಗಳು ಯಾರನ್ನು ಕುರಿತು ಬಣ್ಣಿಸುತ್ತಿರುವುವೋ ಅಂತಹ ಸರ್ವೇಶ್ವರನಾದ ನೀನು ದುಷ್ಟಶಿಕ್ಷಣ ಶಿಷ್ಟರಕ್ಷಣ ರೂಪವಾದ ಲೋಕಾನುಗ್ರಹಾರ್ಥವಾಗಿ, ಗೋಕುಲದಲ್ಲಿ ಕೃಷ್ಣನಾಗಿ ಅವತರಿಸಿರುವೆ. ಎಲೈಪ್ರಭುವೇ ! ನೀನು ಸಾಕ್ಷಾತ್ಪರಬ್ರಹ್ಮಮೂರ್ತಿಯಾದ ನಾರಾಯಣನೆಂಬ ರಹಸ್ಯವನ್ನೂ, ಗೋಪಿಯರು ಬ್ರಹ್ಮನಿಷ್ಠರಾದ ಮಹರ್ಷಿಗಳೆಂಬುದನ್ನೂ ನಿನ್ನನುಗ್ರಹ ವಿಶೇಷದಿಂದಲೇ

ನಾನರಿಶಿರುವೆನು. ಜಗನ್ನಾಥಾ! ನಿನ್ನ ಲೀಲಾಜಾಲವನ್ನರಿಯಲು ಪರ ಮತಪೋಧನರಾದ ಋಷಿಮುನಿಗಳಿಗೇ ಅಸಾಧ್ಯವಾಗಿರುವಲ್ಲಿ ಮನುಷ್ಯಮಾತ್ರರಿಗದು ಸಾಧ್ಯವೇ? ದೇವಾ! ನಿನ್ನ ಅನಂತನಾಮರೂಪಗಳನ್ನು ಬಣ್ಣಿಸಲು ಯಾರಿಂದಾಗುವುದು?

[ಎಂದು ಬಿನ್ನವಿಸಿ ಉದ್ಧವನು ಭಗವಂತನನ್ನು ಸ್ತೋತ್ರಮಾಡುವನು.]

## ಗೋಪೀನಾಥಸ್ತುತಿ.

[ಆನಂದಭೈರವಿ]

ಶ್ರೀಕರುಣಾಕರಗೋಪೀನಾಯಕ। ಪ್ರಾಕಟಶುಭಕರಗೋಪೀನಾಯಕ॥
ಬ್ರಹ್ಮಾಂಡಾಧಿಪಗೋಪೀನಾಯಕ। ಬ್ರಹ್ಮಾದಿವಿನುತಗೋಪೀನಾಯಕ॥
ಶ್ರೀರಮಣೀವರಗೋಪೀನಾಯಕ। ನೀರಜಲೋಚನಗೋಪೀನಾಯಕ॥
ಮಾರಜನಕವರಗೋಪೀನಾಯಕ। ವಾರಿಧಿಮಂದಿರಗೋಪೀನಾಯಕ॥
ನಾರಾಯಣಹರಿಗೋಪೀನಾಯಕ। ಬೃಂದಾರಕನುತಗೋಪೀನಾಯಕ॥
ಚಂದ್ರಕೋಟಿನಿಭಗೋಪೀನಾಯಕ। ಮತ್ಸ್ಯರೂಪಧರಗೋಪೀನಾಯಕ॥
ಮದಸೋಮಕಹರಗೋಪೀನಾಯಕ। ಕೂರ್ಮರೂಪಧರಗೋಪೀನಾಯಕ॥
ಭರ್ಮಕುಧರಧರಗೋಪೀನಾಯಕ। ವರಾಹರೂಪಕಗೋಪೀನಾಯಕ॥
ಹಿರಣ್ಯಾಕ್ಷಹರಗೋಪೀನಾಯಕ। ನಾರಸಿಂಹಹರಿಗೋಪೀನಾಯಕ॥
ಘೋರಧನುಜಹರಗೋಪೀನಾಯಕ। ಆಹ್ಲಾದಾಲಯಗೋಪೀನಾಯಕ॥
ಪ್ರಹ್ಲಾದೋದ್ಧರಗೋಪೀನಾಯಕ। ವಾಮನಮೂರತಿಗೋಪೀನಾಯಕ॥
ಕ್ಷೇಮಂಕರಶ್ರೀಗೋಪೀನಾಯಕ। ಭಾರ್ಗವರಾಮಾಗೋಪೀನಾಯಕ॥
ಮಾರ್ಗಸುಧಾರಕಗೋಪೀನಾಯಕ। ರಘುಕುಲರಾಘವಗೋಪೀನಾಯಕ॥
ಅಗಣಿತಗುಣಗಣಗೋಪೀನಾಯಕ। ಸೀತಾವಲ್ಲಭಗೋಪೀನಾಯಕ॥
ನೀತಿವಿಶಾರದಗೋಪೀನಾಯಕ। ಪಾತಕಭಂಜನಗೋಪೀನಾಯಕ॥
ಕೌಸಲ್ಯಸುತಗೋಪೀನಾಯಕ। ಕೌಶಲ್ಯೋನ್ನತಗೋಪೀನಾಯಕ॥
ದಶರಥನಂದನಗೋಪೀನಾಯಕ। ಪಶುಪತಿಹಿತಕರಗೋಪೀನಾಯಕ॥
ಕೌಶಿಕಮುನಿನುತಗೋಪೀನಾಯಕ। ಸೌಶೀಲ್ಯಾಧಿಕಗೋಪೀನಾಯಕ॥
ಲಕ್ಷ್ಮಣಸೇವಿತಗೋಪೀನಾಯಕ। ಲಕ್ಷ್ಮೀವಲ್ಲಭಗೋಪೀನಾಯಕ॥

ಪನ್ನಿರಾಜಹಿತಗೋಪೀನಾಯಕ। ಶಬರೀತೋಷಕಗೋಪೀನಾಯಕ॥
ಅಭಯಪ್ರದಾಯಕಗೋಪೀನಾಯಕ। ಮಾರುತಿಸೇವಿತಗೋಪೀನಾಯಕ॥
ಭಾರತೀಶನುತಗೋಪೀನಾಯಕ। ದಶಮುಖಮರ್ದನಗೋಪೀನಾಯಕ॥
ಕುಶಲವಿಧಾಯಕಗೋಪೀನಾಯಕ। ವಿಭೀಷಣೋದ್ಧರಗೋಪೀನಾಯಕ॥
ಸುಭಾಷಣಾಂಚಿತಗೋಪೀನಾಯಕ। ಕೃಷ್ಣರೂಪಧರಗೋಪೀನಾಯಕ॥
ದುಷ್ಟದನುಜಹರಗೋಪೀನಾಯಕ। ನಾರದಮುನಿನುತಗೋಪೀನಾಯಕ॥
ಭೂರಿದಯಾಮಯಗೋಪೀನಾಯಕ। ದೇವಕಿನಂದನಗೋಪೀನಾಯಕ॥
ದೇವೇಂದ್ರಾರ್ಚಿತಗೋಪೀನಾಯಕ। ವಸುದೇವಾತ್ಮಜಗೋಪೀನಾಯಕ॥
ವಸುಧಾಧಿಪನುತಗೋಪೀನಾಯಕ। ನಂದಗೋಪಸುತಗೋಪೀನಾಯಕ॥
ಸುಂದರವಿಗ್ರಹಗೋಪೀನಾಯಕ। ಯಶೋದಾನುಮತಗೋಪೀನಾಯಕ॥
ಯಶೋವಿರಾಜಿತಗೋಪೀನಾಯಕ। ಸತ್ವಗುಣಾಧಿಕಗೋಪೀನಾಯಕ॥
ನಿತ್ಯನಿರಂಜನಗೋಪೀನಾಯಕ। ಸತ್ಯಸನಾತನಗೋಪೀನಾಯಕ॥
ಉತ್ತಮನಾಯಕಗೋಪೀನಾಯಕ। ಪ್ರವಿಮಲನಾಮಕಗೋಪೀನಾಯಕ॥
ಭವಹರಸುಖಕರಗೋಪೀನಾಯಕ। ಕವಿಜನಭೂಷಣಗೋಪೀನಾಯಕ॥
ಶಿವರಾಮಾವನಗೋಪೀನಾಯಕ । ಮಂಗಳದಾಯಕಗೋಪೀನಾಯಕ ।
ಗೋಪೀನಾಯಕನಮೋನಮಸ್ತೇ ॥

(ಎಂದಭಿವರ್ಣಿಸುತ್ತ ಉದ್ಧವನು ಶ್ರೀಕೃಷ್ಣನಿಗೆ ನಮಸ್ಕರಿಸುವನು)

ಶ್ರೀಕೃಷ್ಣ:—ಉದ್ಧವಾ! ವಿಶುದ್ಧಾಂತರಂಗ ಪ್ರಬುದ್ಧನಾದ ನಿನಗೆ ಉದ್ಧವ ನಾಮವು ಸಾರ್ಥಕವಾದುದು.

(ಇಷ್ಟರಲ್ಲಿ ಗೋಪಿಯರು ಪ್ರವೇಶಿಸುವರು.)

ಭಾನುಮತಿ:—ಎಲ್ಲವ್ರೋ ಚೋರಕೃಷ್ಣಾ! ನಮ್ಮ ಮನೆಯಲ್ಲಿ ನೀನೇನು ಕೆಲಸಮಾಡಿಬಂದೆ?

ಕಳಾವತಿ:—ಕೃಷ್ಣಾ! ಹಾಲಿನ ಪಾತ್ರೆಯನ್ನು ಮೇಲಿನಿಂದಿಳಿಸಿ ಮಾರ್ಜಾಲಗಳ ಪಾಲು ಮಾಡಬಹುದೇನೋ?

ಮಿಕ್ಕಗೋಪಿಯರು:—ಇಷ್ಟೇಕೆ? ಇವನನ್ನು ಭದ್ರವಾಗಿ ಹಿಡಿದುಕೊಳ್ಳಿರಿ. ಇವನ ಚೇಷ್ಟೆಗಳನ್ನು ಯಶೋದಾದೇವಿಗೆ ತಿಳಿಸುವ.

(ನಂದಿನಿಯು ಕೃಷ್ಣನನ್ನು ಹಿಡಿದುಕೊಳ್ಳುವಳು. ಎಲ್ಲರೂ ಗುಂಪಾಗಿ ಯಶೋದಾದೇವಿಯ ಬಳಿಗೆ ಪೋಗುವರು.)

ಪ್ರದೇಶ:—ನಂದಗೋಪನ ಮನೆ.

ಯಶೋದಾದೇವಿಯು ಮುದ್ದುಬಾಲಕನಾದ ಶ್ರೀಕೃಷ್ಣನಿಗೆ ಹಾಲುಕುಡಿಸುತ್ತ ಲಾಲಿಸುತ್ತಿರುವಳು.



ಯಶೋದೆ:—ರಾಗ—ನವರೋಜು—ಜಂಪೆ.

ಜಯಜಯತುಜಯತು। ಗೋಕುಲಬಾಲಶೀಲಾ ॥ ಪ ॥ ಜಯಜಯತು ನಿಖಿಲಸುರಪಾಲಮುನಿಲೋಲಾ ॥ ಲಾಲಿ ॥ ಅ-ಅ ॥

ಲಾಲಿತ್ರಿಭುವನಪಾಲಲೀಲಶುಭಮೂಲಾ । ನೀಲತನುಜಾಲಜಿತಕಾಲಘನ ಷೀಲಾ ॥ ಲಾಲಿ ॥

ದಾಸಜನಹೃದಯಸದಾತೋಷನವರೂಪಾ । ದೋಷಹರಶಿವರಾಮದಾಸ ಸಂತೋಷಾ ॥ ಲಾಲಿ ॥

[ಗೋಪಿಯರು ಪ್ರವೇಶಿಸುವರು.] ಎಲ್ಲರೂ ನೋಡಿದರೆ ದೃಷ್ಟಿಯಾಗುವುದೆಂದೆಣಿಸಿ ಯಶೋದೆಯು ಕೃಷ್ಣನಮೇಲೆ ಸೆರಗನ್ನು ಮುಚ್ಚುವಳು.

ಗೋಪಿಯರು:—ರಾಗ—ದೇಶಿತೋಡಿ—ಆದಿ.

ಗೋಪಿದೇವೀ। ಲಾಲಿಸಮ್ಮ। ನಿನ್ನಮಗನತುಡುಗುತನವ ॥ ಪ ॥

ಗೋಪಬಾಲರೊಡನೆಕೂಡಿ। ಮನೆಮನೆಯೊಳುತಿರುಗುತಿರುವ ॥ಗೋಪೀ॥ ॥ಅ—ಪ॥

ಪಾಲುಬೆಣ್ಣೆಗಳನುಕದ್ದು। ಬಾಲಕರಿಗೆಹಂಚಿಕೊಡುವ। ಕೇಳುವವರಗೇಲಿಗೈವ। ಪೇಳ್ವದೆಂತಾಚಿತ್ರಗಳನು ॥ ಗೋಪಿ ॥

ಯಶೋದಮ್ಮ! ಕೃಷ್ಣನ ಕಾಟವನ್ನು ತಡೆಯಲು ನಮ್ಮಿಂದಾಗದಮ್ಮ. ಇಗೋ ನೋಡು, ನಿನ್ನ ಮಗನನ್ನು ಹಿಡಿದು ತಂದಿರುವೆವು॥

ಯಶೋದೆ:—ರಾಗ—ಶಂಕರಾಭರಣ—ಏಕತಾಳ.

ಗೋಪಿಯರೀಯೇನಿದು। ಪಟಿಯಾಗುವಿರೀತೆರವೀ ॥ಪ॥

ಗೋಪಾಲಕೃಷ್ಣನನ್ನೋಡಿದೆನೆನುತ। ಪಾಪದಮಾತುಗಳಾಡುವಿರೇನಿದು ॥ ಗೋಪೀ ॥ ಅ-ಪ ॥

ಅಮ್ಮಾ ಗೋಪಿಯರೆ! ನಿಮ್ಮ ಮಾತುಗಳು ಬಹಳ ಸುಳ್ಳು. ಕೃಷ್ಣನು ಬೆಳಗಿನಿಂದಲೂ ನನ್ನ ಬಳಿಯಲ್ಲಿಯೇ ಇರುವನು. ಎಲ್ಲಿಗೂ ಹೋಗಲಿಲ್ಲ. ನಮ್ಮ ಬಾಲಕನು ಚೆನ್ನಾಗಿರುವುದನ್ನು ನೋಡಿ ನೀವು ಸೈರಿಸಲಾರಿರೆಂದು ಕಾಣುವುದು.

ಕೃಷ್ಣನು ನನ್ನ ಮಡಲಿನಲ್ಲಿಯೇ ಮಲಗಿರುವನು. ಪ್ರತ್ಯಕ್ಷದಲ್ಲಿಯೇ ಇಷ್ಟುಸುಳ್ಳು ಹೇಳುವ ನೀವು ಪರೋಕ್ಷದಲ್ಲಿ ಮತ್ತೆಷ್ಟು ಹೇಳುವಿರೊ? ಇನ್ನುಮೇಲೆ ಇಂತಹ ಅಸತ್ಯಕಲ್ಪನೆಗಳನ್ನು ನನ್ನೊಂದಿಗೆ ಹೇಳಬೇಡಿರಿ.

(ಎಂದು ತನ್ನ ಅಂಕಪೀಠದಲ್ಲಿ ಮಲಗಿರುವ ಕೃಷ್ಣನನ್ನು ತೋರಿಸುವಳು.)

ನಂದಿನಿ:—(ಗಾಬರಿಯಿಂದ) ನಾವು ಹೇಳುವುದು ಕಲ್ಪನೆಯಲ್ಲ. ನಿನ್ನ ಮಗನನ್ನು ಹಿಡಿದು ತಂದಿರುವೆವು. ನಿಜವೋ ಸುಳ್ಳೋ ನೀನೇ ನೋಡಮ್ಮ!

(ನಂದಿನಿಯು ಕೈಗೆ ಸಿಕ್ಕಿದ್ದ ಕೃಷ್ಣನು ಅದೃಶ್ಯನಾಗುವನು. ಗೋಪಿಯರೆಲ್ಲರೂ ನಾಚುತ ಮನೆಗೆ ಹೋಗುವರು.)

## ಚತುರ್ಥಾಂಕಂ—ಚತುರ್ಥರಂಗಂ.

### ಪ್ರದೇಶ—ಬೃಂದಾರಣ್ಯ.



ಬೃಂದಾವನದಲ್ಲಿ ಗೋಪಾಲಕರೊಂದಿಗೆ ಗೋವುಗಳನ್ನು ಮೇಯಿಸುತ್ತಿದ್ದ ಶ್ರೀಕೃಷ್ಣನು ಯಮುನಾತೀರದ ಒಂದಾನೊಂದು ವೃಕ್ಷದ ನೆರಳಿನಲ್ಲಿ ನಿಂತು ಗೋವುಗಳನ್ನೆಲ್ಲಾ ನೆರಳಿಗೆ ಕೂಗುವನು.

ಶ್ರೀಕೃಷ್ಣ:—

ಸೀ॥ ಬಾಪೂರ್ಣಚಂದ್ರಿಕೆ ! ಬಾರೆಗೋದಾವರಿ ! ಬಾರೆಭಾಗೀರಥಿ ! ಬಾ ವಿಶಾಲೆ !
ಬಾಸತ್ಯವತಿ ! ಶಾಂತೆ ! ಭಾರೆಚಿಂತಾಮಣಿ ! ಬಾರೆಸೌದಾಮಿನಿ ! ಬಾ
ಲತಾಂಗಿ । ಬಾಸರ್ವಮಂಗಳೆ ! ಬಾರೆಮಂದಾಕಿನಿ ! ಬಾಸರಸ್ವತಿ ! ಬೇಗ
ಬಾಧರಿತ್ರಿ ॥ ಬಾಶ್ರೀಮಹಾಲಕ್ಷ್ಮಿ ! ಬಾಬಾರೆನಂದಿನಿ ! ಬಾವೈಜಯಂತಿ !
ನೀಬಾರೆಯಮುನೆ ॥

ಗೀ॥ ಬಾಮನೋಹರಿ ! ಕಲ್ಯಾಣಿ! ಪಂಕಜಾಕ್ಷಿ। ಬಾಮದಾಲಸೆ! ವೈತ್ರೇಯಿ ॥
ಮಧುರವಾಣಿ। ಬಾಸರೋಜಿನಿ! ವೋಹಿನಿ!ಕೃಷ್ಣವೇಣಿ।ಬಾರೆಮೀನಾಕ್ಷಿ !
ಕಾಮಾಕ್ಷಿ! ಬನ್ನಿ ! ಬನ್ನಿ ॥

(ಎಂದು ಶ್ರೀಕೃಷ್ಣನು ಕೂಗುತ್ತಲೇ ಗೋವುಗಳೆಲ್ಲವೂ, ಅನುರಾಗಪೂರಿತವಾಗಿ ಅರಚುತ್ತ ಓಡಿಬಂದು ಶ್ರೀಕೃಷ್ಣನ ಸುತ್ತಲೂ ನಿಲ್ಲುವುವು.)

ಗೋಪಾಲಕರು:—ಕೃಷ್ಣಾ ! ಈಗೋವುಗಳು ನೀನು ಹೇಳಿದ ಹಾಗೆಲ್ಲಾ ಕೇಳುತ್ತಿರುವುವು.

ಶ್ರೀಕೃಷ್ಣ:—ಗೆಳೆಯರೇ ! ಅದು ಹೇಗೆ?

ಗೋಪಾಲಕರು:—ಕೃಷ್ಣಾ ! ನೀನು ಕರೆಯುತ್ತಲೇ ಇವುಗಳೆಲ್ಲವೂ ಇಷ್ಟು ಸೊಂಪಾಗಿ ಕೂಗಾಡುತ್ತ ಬಂದು ನಿಂತಿರುವುವು. ನಾವೇನಾದರೂ ಕೂಗಿದ್ದರೆ ಈ ಮಡುವಿನ ಬಳಿಗೆ ಒಂದಾದರೂ ಬರುತ್ತಿರಲಿಲ್ಲ.

ಶ್ರೀಕೃಷ್ಣ:—ಮಿತ್ರರೇ! ಈಮಡುವಿನ ಬಳಿಯಲ್ಲಿ ವಿಶೇಷವೇನು ?

ಗೋಪಾಲಕರು:—ಕೃಷ್ಣಾ ! ಯಮುನಾನದಿಯಲ್ಲಿ ಅನೇಕ ಮಡುವುಗಳಿರುವುವು. ಆದಾಗ್ಯೂ ಈಮಡುವಿನಂತಹ ಭಯಂಕರವಾದುದು ಮತ್ತೆಲ್ಲಿಯೂ ಇರಲಾರದು. ಈಮಡುವಿನಲ್ಲಿ ಯಾವ ಪ್ರಾಣಿಯಾದರೂ ಒಂದು ತೊಟ್ಟು ನೀರೇನಾದರೂ ಕುಡಿಯಿತಾದರೆ ಆಕ್ಷಣದಲ್ಲಿಯೇ ತಲೆತಿರುಗಿ ಅಲ್ಲಿಯೇ ಬಿದ್ದು ಸಾಯುವುದು. ಆದುದರಿಂದ

ಇದಕ್ಕೆ "ಯಮುನ ಮಡುವೆಂದು" ಹೆಸರು ಬಂದಿರುವುದು. ಇದು ಮಹಾ ಅಪಾಯಕರವಾದುದು. ಕೃಷ್ಣಾ! ಗೋವುಗಳನ್ನಟ್ಟಿಕೊಂಡು ಮತ್ತೊಂದು ಕಡೆಗೆ ಹೋಗೋಣ ನಡೆ!

ಶ್ರೀಕೃಷ್ಣ:—(ತನ್ನಲ್ಲಿ) ಓಹೋ! ಕಾಳೀಯನೆಂಬ ಸರ್ಪರಾಜನು ತನ್ನ ವಿಷಜ್ವಾಲೆಗಳಿಂದ ಈ ಮಡುವಿನ ಜಲವನ್ನೆಲ್ಲಾ ಕೆಡಿಸಿ ಹಾಳುಮಾಡಿರುವನು. ಇದಕ್ಕಾಗಿಯೇ ಈಗೋಪಾಲಕರಿಷ್ಟು ಹೆದರುತ್ತಿರುವರು. ಆಗಲಿ! ಈ ಕ್ರೂರ ಸರ್ಪವನ್ನು ಶಿಕ್ಷಿಸುವುದಕ್ಕೆ ಇದೇ ತಕ್ಕ ಸಮಯವು.

(ಎಂದು ನಿಶ್ಚಯಿಸಿ ಮಡುವಿನ ದಡದಲ್ಲಿದ್ದ ಕದಂಬವೃಕ್ಷವನ್ನೇರಿ ಭುಜಗಳನ್ನು ತಟ್ಟುತ ಮಡುವಿನಲ್ಲಿ ದುಮುಕುವನು.)

ಕಾಳೀಯ:—ಆಹಾ! ಇದೇನಾಶ್ಚರ್ಯ. ನಾನು ವಾಸಮಾಡತಕ್ಕ ಈ ಮಡುವಿನ ಬಳಿಗೆ ಬರುವುದಕ್ಕೇ ಪ್ರಾಣಿಕೋಟಿಗಳು ಭಯಪಡುವವಲ್ಲಾ! ನನ್ನ ವಾಸಸ್ಥಾನವನ್ನು ಇಷ್ಟು ನಿರ್ಭಯವಾಗಿ ಹೊಕ್ಕು ಆಟವಾಡುತ್ತಿರುವ ಈಹುಡುಗನು ಯಾರಾಗಿರಬಹುದು? ಓಹೋ! ಇವನಾರೋ ಧೈರ್ಯಶಾಲಿಯಾಗಿ ಕಾಣುವನು. ಯಾರಾದರೇನು? ಭಯಂಕರವಾದ ನನ್ನ ವಿಷಾಗ್ನಿಜ್ವಾಲೆಗಳಿಂದ ಇವನನ್ನು ದಹಿಸುವೆನು. ಇವನೆಷ್ಟು! ಇವನಪ್ರತಾಪವೆಷ್ಟು!

(ಕಾಳೀಯನು ಅತಿರೋಷದಿಂದ ತನ್ನ ಹೆಡೆಗಳನ್ನು ಬಿಚ್ಚಿ ಕೃಷ್ಣನಶರೀರದಲ್ಲಿ ನಾಲ್ಕಾರುಕಡೆ ಕಚ್ಚಿ ಆತನ ಶರೀರಕ್ಕೆ ಸುತ್ತಿಕೊಳ್ಳುವನು.)

ಶ್ರೀಕೃಷ್ಣ:—ಈ ಕ್ರೂರಸರ್ಪಕ್ಕೆ ನಾನು ಒಳಪಟ್ಟಂತೆಯೇ ಸ್ವಲ್ಪ ಹೊತ್ತು ನಟಿಸುವೆನು.

(ಎಂದು ಸರ್ಪದಕೈಗೆ ಸಿಕ್ಕಿ ಅಲ್ಲಾಡದೆ ಸ್ತಬ್ಧನಾಗಿರುವ ಕೃಷ್ಣನನ್ನು ಕಂಡು ಗೋಪಾಲಕರು, ಅತ್ಯಂತ ದುಃಖದಿಂದಲೂ, ಭಯದಿಂದಲೂ, ಕಂಗೆಟ್ಟು ಶೋಕಿಸುತ್ತ ಮೂರ್ಛೆಹೋಗುವರು. ಗೋವುಗಳೆಲ್ಲವೂ ಕಣ್ಣಲ್ಲಿ ನೀರುಸುರಿಸುತ್ತ ಅರಚುತ್ತ ನಿಂತಿರುವುವು.)

ಪ್ರದೇಶ— ಗೋಕುಲ.

ಗೋಪ ಗೋಪಿಯರು ನಂದಗೋಪನಮನೆಯಲ್ಲಿ ಗುಂಪುಕೂಡುವರು.



ಯಶೋದೆ:—ಈದಿವಸವಿಷ್ಟು ಮಹೋತ್ಪಾತಗಳುಂಟಾಗುವುದಕ್ಕೇನು ಕಾರಣ? ಭೂಮಿಯು ಕಂಪಿಸಿತು. ಅಂತರಿಕ್ಷದಲ್ಲಿ ಮೇಘಗಳೆಲ್ಲವೂ ವಿವರ್ಣವಾಗಿ ಕಾಣುವುವು. ನನ್ನ ಬಲಗಣ್ಣೇಕೋ ಚಲಿಸುತ್ತಿರುವುದು. ಪ್ರತಿದಿವಸವೂ ಬಲರಾಮನೂ ಕೃಷ್ಣನೂ ಇಬ್ಬರೂ ಜತೆಯಾಗಿ ಕಾಡಿಗೆಹೋಗುತ್ತಿದ್ದರು. ಈದಿವಸ ಕೃಷ್ಣನೊಬ್ಬನೇ ಕಾಡಿಗೆ ಹೋಗಿರುವನು. ಈ ದುರ್ನಿಮಿತ್ತಗಳನ್ನು ನೋಡಿದರೆ, ಮನಸ್ಸಿಗೆ ಬಹಳ ಅನುಮಾನವುಂಟಾಗುತ್ತಿರುವುದು. ಕೃಷ್ಣನನ್ನು ನೋಡುವ

ತನಕ ನನ್ನ ಮನಸ್ಸಿಗೆ ಸಮಾಧಾನವಿರುವುದಿಲ್ಲ. ನಾಥಾ! ಈ ಪರಿತಾಪವನ್ನು ಸೈರಿಸಲಾರೆನು. ನಡೆಯಿರಿ. ಈಗಲೇ ಕಾಡಿಗೆ ತೆರಳುವ!

ನಂದ:—ದೇವೀ! ನನ್ನಭಿಪ್ರಾಯವೂ ಹಾಗೆಯೇ ಇರುವುದು.

ಗೋಪಿಯರು:—ಪೂಜ್ಯರೇ! ಶ್ರೀ ಕೃಷ್ಣಮೂರ್ತಿಯನ್ನು ನೋಡದೆ ಕ್ಷಣಮಾತ್ರವೂ ಜೀವಿಸಲಾರೆವು. ನಿಮ್ಮೊಂದಿಗೆ ನಾವೂ ಬರುವೆವು.

ಗೋಪರು:—ಪ್ರಭುವೇ! ಶ್ರೀ ಕೃಷ್ಣನನ್ನು ನೋಡುವತನಕ ನಾವು ಆಹಾರವನ್ನು ಸಹಾ ಕೊಳ್ಳುವುದಿಲ್ಲವು.

ನಂದ:—ಎಲ್ಲರೂ ತೆರಳಿರಿ. ಕಾಡಿಗೆ ಹೋಗುವ.

(ಎಲ್ಲರೂ ಕಾಡಿಗೆ ತೆರಳುವರು.)

ಗೋಪರು:—ಪ್ರಭುವೇ! ಹೀಗೆಬನ್ನಿ. ಈ ದಾರಿಯಲ್ಲಿ ಹೋಗುವುದು ಸುಲಭವು. ಇದು ದನಕರುಗಳು ಓಡಾಡುವ ದಾರಿಯು. ಹೀಗೆ ದಯಮಾಡಿಸಿರಿ.

(ಸ್ವಲ್ಪದೂರಹೋಗುತ್ತಲೇ ಯಶೋದೆಯು ಶ್ರೀ ಕೃಷ್ಣನ ಹೆಜ್ಜೆಗಳನ್ನು ಗುರ್ತಿಸುವಳು.

ಯಶೊದೇ:— ರಾಗ—ತೋಡಿ—ಅಟತಾಳ.

ಹೆಜ್ಜೆಗಳಿವೆ ನೋಡಿರೇ। ಶ್ರೀ ಕೃಷ್ಣನ ಹೆಜ್ಜೆಗಳಿವೆ ನೋಡಿರೇ ॥ಪ!
ಅಬ್ಜ ಅಂಕುಶಧ್ವಜ ರೇಖಾಶೋಭಿತಮಾದ ॥ ಹೆಜ್ಜೆ ॥ಅ-ಪ॥

ನಂದಗೋಪ:—ಬಾಲಗೋಪಾಲನೀ ಕಾಂತಾರದೊಳಗಾವ ಲೀಲೆಗೈಯ್ಯುವನೊ ಎಲ್ಲಿರ್ಪನೊ ನೋಡುವ ॥ಹೆಜ್ಜೆ॥

ಗೋಪಿಯರು:—ಚಂದ್ರನ ಯದುಕುಲಚಂದ್ರನ ನೋಡುವ, ಮಂದಗಮನೆಯರೆ ಮುಂದಾಗಿಬನ್ನಿರಿ ॥ ಹೆಜ್ಜೆ ॥

ಗೋಪರು:—ಭೂರಿಕಾನನದೊಳು ನೀರೇಜಲೋಚನನಾರೊಡಗೂಡಿ ಎಲ್ಲಿರುವನೊ ನೋಡುವ ॥ಹೆಜ್ಜೆ॥

ಉದ್ಧವ:—ದೇವಾ ಇವರ ದೀನಭಾವವನೀಕ್ಷಿಸಿ, ಕಾವುದೀಗಲೆ ಶಿವರಾಮದಾಸನುತ ॥ ದೇವಾದಯಾಸಾಂದ್ರಾ ॥ ಹೆಜ್ಜೆ॥

(ಇಂತು ನಂದ ಯಶೋದಾದಿಗಳೆಲ್ಲರೂ ಕೃಷ್ಣನನ್ನು ನುಡುಕುತ್ತ ಯಮುನಾತೀರಕ್ಕೆಬಂದು, ಮಡುವಿನಲ್ಲಿ ಕಾಳೀಯನಿಂದ ಸುತ್ತ

ಲ್ಪಟ್ಟು ಚಿತ್ರಪ್ರತಿಮೆಯಂತೆ ನಿಶ್ಚೇಷ್ಟಿತನಾಗಿದ್ದ ಕೃಷ್ಣನನ್ನು ಕಂಡು ಆತನ ಲೀಲೆಯನ್ನರಿಯದವರಾಗಿ ಬಹಳ ಗಾಬರಿಗೊಂಡ ದುಃಖಿಸುವರು.)

ಯಶೋದೆ:—ಕೃಷ್ಣಾ! ಈ ನಿನ್ನ ಕಷ್ಟದಶೆಯನ್ನು ನೋಡುತ್ತ ನಾನಿನ್ನೂ ಬದುಕಿರುವೆನಲ್ಲಾ ನಾನೆಷ್ಟು ಪಾಪಾತ್ಮಳು. ಕಂದಾ! ಈ ಪಾಪಿಸರ್ಪವನ್ನು ಕೊಂದು ನಿನ್ನನ್ನು ಬಿಡಿಸತಕ್ಕ ಪುಣ್ಯಾತ್ಮರಾರು? ಅಂಥವರೂ ಇರುವರೆ? ಕೃಷ್ಣಾ! ನಾನೇನು ಮಾಡಬಲ್ಲೆನು! ನಿನ್ನ ಬಾಲ್ಯಲೀಲೆಗಳನ್ನು ನೋಡಿ ಆನಂದಿಸುತ್ತಿದ್ದ ನನ್ನ ಹೃದಯವು ಬಿರಿದುಹೋಗುತ್ತಿರುವುದಲ್ಲಾ! ಕೃಷ್ಣಾ! (ಎಂದು ಘೋರವಾಗಿ ಶೋಕಿಸುವಳು.)

ನಂದ:—ಕಂದಾ! ಈ ಸರ್ಪವನ್ನು ಯಾವ ಉಪಾಯದಿಂದ ಕೊಲ್ಲಬೇಕೆಂಬುದೇ ನನಗೆ ತೋಚಲಿಲ್ಲವಲ್ಲಾ! ಈ ನಿನ್ನ ಸಂಕಟವನ್ನು ಪರಿಹರಿಸಿ, ನಮ್ಮೆಲ್ಲರನ್ನೂ ಈ ಘೋರವಿಪತ್ತಿನಿಂದ ಪಾರು ಮಾಡಿಸತಕ್ಕವರಾರು? ದೈವವೇ! ನಿನಗಾದರೂ ಕರುಣವಿಲ್ಲವೆ?

ಗೋಪಿಯರು:—ಹಾ! ವಿಧಿವಿಲಾಸವೆಷ್ಟು ಕ್ರೂರವಾಗಿ ಪರಿಣಮಿಸಿತು. ಇನ್ನು ನಾವು ಯಾರ ಅಂದಚಂದಗಳನ್ನು ನೋಡಬೇಕು? ಯಾರಿಗಾಗಿ ನಾವು ಜೀವಿಸಿರುವೆವೋ ಅಂತಹ ನಮ್ಮ ಪ್ರಾಣಧನವೇ ಅಪಾಯಕ್ಕೆ ಗುರಿಯಾಗಿರುವಲ್ಲಿ ನಾವು ಜೀವಿಸಿದ್ದು ಫಲವೇನು?

ಗೋಪರು:—ಅಕಟಾ! ಶ್ರೀ ಕೃಷ್ಣನಿಗಪಾಯವುಂಟಾದರೆ ಯಶೋದೆಯು ಜೀವಿಸಲಾರಳು. ಯಶೋದೆ ಇಲ್ಲದಮೇಲೆ ನಂದನು ಕ್ಷಣ ಮಾತ್ರವೂ ಜೀವಿಸಲಾರನು. ಈ ಗೋಪಿಯರಾದರೋ ಯಶೋದೆಗಿಂತಲೂ ಮೊದಲೇ ಪರಲೋಕದಮಾರ್ಗವನ್ನು ನೋಡುತ್ತಿರುವರು. ಇವರೆಲ್ಲರೂ ಗತಿಸಿದಮೇಲೆ ನಾವುಗಳುಮಾತ್ರ ಜೀವಿಸಿಫಲವೇನು? ಹಾ! ಕಾಳಸರ್ಪವೇ! ನಂದಗೋಕುಲವನ್ನು ನಿರ್ಮೂಲಮಾಡುವುದಕ್ಕಾಗಿಯೇ ನೀನೀಮಡುವಿನಲ್ಲಿ ಸೇರಿದ್ದೆಯಾ?

ಯಶೋದೆ:—ನಾಥಾ! ಕೃಷ್ಣನಿರುವ ಈ ಮಡುವಿನಲ್ಲೇ ನಾನೂ ಬಿದ್ದು ಪ್ರಾಣಗಳನ್ನು ತೊರೆಯುವೆನು.

ಉದ್ಧವ:—ದೇವೀ! ಸ್ಥೈರಿಸು! ಸ್ಥೈರಿಸು! ಸ್ವಲ್ಪಕಾಲ ಸ್ಥೈರಿಸು!

ಶ್ರೀ ಕೃಷ್ಣ:—(ತನ್ನಲ್ಲಿ) ಓಹೋ! ಇನ್ನು ಸಾವಕಾಶಮಾಡಿದರೆ ಇವರೆಲ್ಲರೂ ನಿಜವಾಗಿಯೇ ಪ್ರಾಣಗಳನ್ನು ತೊರೆದುಬಿಡುವರು. ಆದಪ್ರಯುಕ್ತ ನಾನಿನ್ನು ಸಾವಕಾಶಮಾಡಬಾರದು. ಮದಾಂಧನಾದ ಕಾಳೀಯನ ಗರ್ವವನ್ನು ಮುರಿಯುವೆನು.

(ಎಂದು ಶ್ರೀ ಕೃಷ್ಣನು ತನ್ನ ಶರೀರವನ್ನು ಬೆಳಸಿ ಕಾಳೀಯನ ಕಟ್ಟುಗಳನ್ನು ಮುರಿದು, ಅವನ ಹೆಡೆಗಳಮೇಲೆ ನಾಟ್ಯವಾಡುತ್ತ ನೂರಾರುಹೆಡೆಗಳುಳ್ಳ ಅವನ ತಲೆಯನ್ನು ನುಗ್ಗು ನುಗ್ಗಾಗಿ ತುಳಿಯುತ್ತಲೇ ಕಾಳೀಯನು ತನ್ನಮೂಗಿನ ಹೊಳ್ಳೆಗಳಿಂದ ನಿಟ್ಟುಸುರುಗಳನ್ನು ಬಿಡುತ್ತ ಬಾಯಿಂದ ರಕ್ತವನ್ನುಸುರಿಸುತ್ತ, ಕೊಳ್ಳಿಗಳಂತೆ ಬೆಳಗುತ್ತಿರುವ ಕಣ್ಣಳಿಂದ ಬಿಸಿನೀರು ಸುರಿಯುತ್ತಿರಲು ದುರ್ಬಲನಾಗಿ, ಕೃಷ್ಣನ ಪ್ರಭಾವವನ್ನರಿತು, ಚೆನ್ನಾಗಿ ಬಾಯಿಬಿಡುವುದಕ್ಕಾದರೂ ಯತ್ನವಿಲ್ಲದೆ ಮನಸ್ಸಿನಲ್ಲಿಯೇ ಧ್ಯಾನಮಾಡುತ್ತ ಶರಣಾಗತನಾಗುವನು.)

---

## ಚತುರ್ಥಾಂಕಂ:—ಪಂಚಮರಂಗಂ.



ದೇವತೆಗಳು ಗಗನಮಂಡಲದಿಂದ, ಶ್ರೀ ಕೃಷ್ಣನಮೇಲೆ ಪೂಮಳೆ ಗರೆಯುವರು. ಕಾಳೀಯನ ಪತ್ನಿಯರು ಶ್ರೀ ಕೃಷ್ಣಮೂರ್ತಿಯ ಪಾದಪದ್ಮಗಳನ್ನು ಪುಷ್ಪಗಳಿಂದ ಪೂಜಿಸುತ್ತ ಪ್ರಾರ್ಥಿಸುವರು.

ಕಾಳಿಂಗನ ಪತ್ನಿಯರು :—

ಉ॥ ವರಬೃಂದಾವನವಾಸಲೀಲ ಮುನಿಗೋ ಬೃಂದಾವನಾಮೋದಶ್ರೀ ।
ಕರರಾಧಾಮಣಿಲೋಲ ಸರ್ವಸುಗುಣಾನಂದಾಲವಾಲಾ ಸದಾ ॥
ಮುರಳೀಗಾನವಿಲೋಲ ಗೋಪರಮಣೀ ಸೌಭಾಗ್ಯ ಚಂದ್ರೋದಯಾ।
ಪರಮಾನಂದಮುಕುಂದ ಕೃಷ್ಣ ಹರಿಗೋವಿಂದಾ ನಮಸ್ತೇನಮಃ ॥

ಎಲೈ ಸರ್ವಶಕ್ತನಾದ ಭಗವಂತನೇ! "ಸಮೋಽಹಂಸರ್ವ ಭೂತೇಷು, ನಮೇದ್ವೇಷೋಽಸ್ತಿನಪ್ರಿಯಃ ॥ ಎಂಬ ನಿನ್ನ ಶಾಸನದಂತೆ ನಿನಗೆ ವಿರೋಧಿಯೂ ಇಲ್ಲ. ಇಷ್ಟನೂ ಇಲ್ಲ. ಆದಾಗ್ಯೂ ಯಾವಾಗ ಅಧರ್ಮವು ಹೆಚ್ಚಿ ಧರ್ಮವು ಕಳೆಗುಂದುವುದೋ ಆಗ ನೀನು ಮರ್ತ್ಯಲೋಕದಲ್ಲಾವರಿಸಿ, ಅಧರ್ಮ ಪ್ರವರ್ತಕರಾದ ದುರ್ಮಾರ್ಗರನ್ನು ಶಿಕ್ಷಿಸಿ, ಧರ್ಮಾತ್ಮರಾದ ಸಾಧುಜನರನ್ನು ಕಾಪಾಡುತ್ತಿರುವೆ. ನಿನ್ನ ಆಗ್ರಹ ಅನುಗ್ರಹಗಳೆರಡೂ ಲೋಕರಕ್ಷಣಾರ್ಥವಾಗಿಯೇ ಹೊರತು, ಪಕ್ಷೀಕವಾಗಿ ನಿನಗೆ ಯಾರಲ್ಲಿಯೂ ದ್ವೇಷವಿಲ್ಲವು. ಎಲೈ ವಾಸುದೇವನೇ! ನಿನ್ನ ಪಾದಧೂಳಿಯು ಯಾರತಲೆಯಮೇಲೆ ಬೀಳುವುದೋ ಅಂಥವರು ಇಂದ್ರಪದವಿಯನ್ನು ತೃಣಪ್ರಾಯವಾಗಿ ಭಾವಿಸುವರು. ಇವನು ಶತ್ರುವು, ಇವನು ಮಿತ್ರನು ಎಂಬ ಮಾತ್ಸರ್ಯವಿಲ್ಲದೆ, ಲೋಕರಕ್ಷಣಾರ್ಥವಾದ ದುಷ್ಟಶಿಕ್ಷಣಗ ಶಿಷ್ಟರಕ್ಷಣಗಳೇ ನಿನ್ನ ಮುಖ್ಯೋದ್ದೇಶವಾಗಿರುವುದರಿಂದ ನೀನು ಯಾವುದರಲ್ಲಿಯೂ ಸಂಬಂಧವಿಲ್ಲದೆ ನಿರ್ಲಿಪ್ತನಾಗಿರುವೆ.

ಶ್ಲೋ॥ ಆತ್ಮಜ್ಞಾನಮಿದಂಜ್ಞಾನಂ। ಜ್ಞಾತ್ವಾಪಂಚಸ್ವವಸ್ಥಿತಂ।
ಯಂಜ್ಞಾನೇನಾಧಿಗಚ್ಛಂತಿ। ತಸ್ಮೈಜ್ಞಾನಾತ್ಮನೇ ನಮಃ॥

ಭೂತಜಾಲದಲ್ಲಿ ನೆಲೆಗೊಂಡಿರುವ ಜ್ಞಾನಸ್ವರೂಪನಾದ ಯಾವ ಭಗವಂತನನ್ನು ಜ್ಞಾನವಂತರಾದವರು, ಜ್ಞಾನಬಲದಿಂದ ತಿಳಿದು ಧನ್ಯರಾಗುವರೋ ಅಂತಹ ಜ್ಞಾನಾತ್ಮನಾದ ನಿನಗೆ ನಮಸ್ಕಾರಗಳು!

" ಯೇಮೋಹಯತಿಭೂತಾನಿ ॥ ಸ್ನೇಹಪಾಶಾನುಬಂಧನೈಃ ।
ಸರ್ವಸ್ಯರಕ್ಷಣಾರ್ಥಾಯ । ತಸ್ಮೈವೋಹಾತ್ಮನೇನಮಃ " ॥

ಯಾವಾತನು ಸೃಷ್ಟಿಯನ್ನು ಪಾಲಿಸುವುದಕ್ಕಾಗಿ ಸ್ನೇಹವೆಂಬ ಪಾಶಗಳಿಂದ ಸಮಸ್ತಭೂತಗಳನ್ನೂ ಬಂಧಿಸಿ ಮೋಹಗೊಳಿಸುತ್ತಿರುವನೋ ಅಂತಹ ಜಗನ್ಮೋಹಕಸ್ವರೂಪನಾದ ನಿನಗೆ ನಮಸ್ಕಾರಗಳು!

" ಚೈತನ್ಯಂಸರ್ವತೋನಿತ್ಯಂ । ಸರ್ವಪ್ರಾಣಿಹೃದಿಸ್ಥಿತಂ ।
ಸರ್ವಾತೀತತರಂಸೂಕ್ಷ್ಮಂ । ತಸ್ಮೈಸೂಕ್ಷ್ಮಾತ್ಮನೇನಮಃ "

ಯಾವಾತನು ಶಾಶ್ವತಸ್ವರೂಪವುಳ್ಳವನಾಗಿ ಸಕಲ ಪ್ರಾಣಿಗಳ ಹೃದಯ ಮಧ್ಯದಲ್ಲಿ ಬಹು ಸೂಕ್ಷ್ಮಭಾವದಿಂದ ಚೈತನ್ಯಸ್ವರೂಪನಾಗಿ ಪ್ರಕಾಶಿಸುತ್ತಿರುವನೋ ಅಂತಹ ಸೂಕ್ಷ್ಮಸ್ವರೂಪನಾದ ನಿನಗೆ ನಮಸ್ಕಾರಗಳು!

ಪಂಚಭೂತಾತ್ಮಭೂತಾಯ । ಭೂತಾದಿನಿಧನಾಯಚ ।
ಅಕ್ರೋಧದ್ರೋಹಮೋಹಾಯ । ತಸ್ಮೈಶಾಂತಾತ್ಮನೇನಮಃ"

ಯಾವ ಮಹಾ ಮಹಿಮನು ಪಂಚಭೂತಗಳಿಗೂ ಆತ್ಮಭೂತನಾಗಿ ಕ್ರೋಧ, ದ್ರೋಹ, ಮೋಹ, ಶೂನ್ಯನಾಗಿ ಮೆರೆಯುವನೋ ಅಂತಹ ಶಾಂತಾತ್ಮನಾದ ನಿನಗೆ ನಮಸ್ಕಾರಗಳು!

" ಯಸ್ಮಿನ್ಸರ್ವಂಯತಸ್ಸರ್ವಂಯಃಸರ್ವಂಸರ್ವತಶ್ಚಯಃ ।
ಯಶ್ಚಸರ್ವಮಯೋದೇವಃ ತಸ್ಮೈಸರ್ವಾತ್ಮನೇನಮಃ ॥

ಯಾವಾತನಲ್ಲಿ ಚರಾಚರಾತ್ಮಕವಾದ ಪ್ರಪಂಚವಿರುವುದೋ, ಯಾವಾತನಿಂದ ಸರ್ವಪ್ರಪಂಚವೂ ಬಹಿರಂಗವಾಗಿ ಬೆಳಗುವುದೋ, ಯಾವಾತನು ಸಮಸ್ತಸ್ವರೂಪನಾಗಿರುವನೋ, ಯಾವಾತನು ಎಲ್ಲೆಲ್ಲಿಯೂ ವ್ಯಾಪಿಸಿರುವನೋ, ಅಂತಹ ಸರ್ವಾತ್ಮನಾದ ನಿನಗೆ ನಮಸ್ಕಾರಗಳು!

ಪರಂಧಾಮನೇ! ಸನಕಾದಿ ಮಹಾಮುನಿಗಳು ಯಾವುದನ್ನು ತಮ್ಮ ಮಾನಸಕಮಲಾಸನಗಳಲ್ಲಿ ನೆಲೆಗೊಳಿಸಿ ಪೂಜಿಸುವರೋ

ಅಂತಹ ನಿನ್ನ ಶ್ರೀಪಾದ ಪದ್ಮಗಳು ನಮ್ಮ ಪತಿಯಾದ ಈ ಕಾಳೀಯನ ಹೆಡೆಗಳಮೇಲೆ ಯಾವ ನಿಮಿಷದಲ್ಲಿ ಆನಂದ ನರ್ತನಮಾಡಿದುವೋ ಆ ನಿಮಿಷದಲ್ಲಿಯೇ ನಮ್ಮ ಪತಿಯು ಪುನೀತನಾದನು. ಭಯಂಕರವಾದ ಈ ಸರ್ಪಜನ್ಮವು ನೀಗಿ ಸುಖಪಡುವ ಯೋಗವು ಕೈಗೂಡಿತು. ನಿನ್ನ ಅನುಗ್ರಹದಿಂದ ನಾವಿನ್ನು ನಮ್ಮ ಪತಿಯೊಂದಿಗೆ ಚಿರಕಾಲ ಸುಖವಾಗಿ ಬಾಳುವೆವು. ಸರ್ವಶರಣ್ಯನೇ! ನಿನ್ನ ಶಾಸನವನ್ನು ಮೀರಿ ನಡೆಯ ತಕ್ಕವರಾರು? ಅಖಂಡ ಬ್ರಹ್ಮಾಂಡಗಳೆಲ್ಲವೂ ನಿನ್ನ ಶಾಸನಕ್ಕೊಳಪಟ್ಟಿರುವುವು.

ಶ್ರು॥ ನತತ್ರಸೂರ್ಯೋಭಾತಿ ನಚಂದ್ರತಾರಕಂ ನೇಮಾವಿದ್ಯುತೋಭಾನ್ತಿ ಕುತೋಯಮಗ್ನಿಃ। ತಮೇವಭಾನ್ತಮನುಭಾತಿಸರ್ವಂತಸ್ಯ ಭಾಸಾಸರ್ವಮಿದಂ ವಿಭಾತಿ ॥

ಎಂಬ ಶ್ರುತಿವಚನಗಳು ಯಾರ ಮಹಾಮಹಿಮೆಯನ್ನು ಸಾರುತ್ತಿರುವುವೋ ಅಂತಹ ಸ್ವಯಂಪ್ರಕಾಶಮೂರ್ತಿಯಾದ ನಿನ್ನ ಶಾಸನದಿಂದಲೇ ಸೂರ್ಯಚಂದ್ರಾಗ್ನಿಗಳೆಲ್ಲವೂ ಪ್ರಕಾಶಿಸುತ್ತಿರುವುವು. ಎಲೈ ಸ್ವಾಮಿಯೇ! ಜಗನ್ಮಂಗಳಾಕಾರನಾದ ನಿನ್ನ ಸಂದರ್ಶನವು ಯಾರಿಗೆ ಲಭಿಸುತ್ತದೆಯೋ ಅಂಥವರಿಗೆ ತಾಪತ್ರಯ ಸಂಬಂಧವಾದ ಕಾರ್ಪಣ್ಯಗಳೆಲ್ಲವೂ ತೊಲಗಿಹೋಗುತ್ತವೆ. ಜಗನ್ನಾಥಾ! ನಿನ್ನ ಚರಣ ತಾಡನದಿಂದ ದುರ್ಬಲನಾಗಿರುವ ಈ ಕಾಳೀಯನಿಗೆ ನೂತನ ಜವಸತ್ವಗಳನ್ನನುಗ್ರಹಿಸಿ ನಮಗೆ ಪತಿಭಿಕ್ಷವನ್ನು ಕೊಡು!

(ಎಂದು ಪ್ರಾರ್ಥಿಸುತ್ತ ನಾಗಪತ್ನಿಯರು ಶ್ರೀ ಕೃಷ್ಣಮೂರ್ತಿಯ ಶರಣು ಹೊಗುವರು.)

ಕಾಳೀಯ:—ಸರ್ವಾತ್ಮನಾದ ಭಗವಂತನೇ! ಶರಣಾಗತನಾದ ನನ್ನ ದೋಷಗಳನ್ನು ಕ್ಷಮಿಸಿ ಕಾಪಾಡು!

ಶ್ರೀಕೃಷ್ಣ:—ಎಲೌ ನಾಗಪತ್ನಿಯರೇ! ನಿಮ್ಮ ಭಕ್ತಿಗೆ ಮೆಚ್ಚಿದೆನು. ನಿಮಗೆ ದೀರ್ಘಸುಮಂಗಲೀತ್ವವನ್ನು ಅನುಗ್ರಹಿಸಿರುವೆನು. ನಿಮ್ಮ ಪತಿಯೊಂದಿಗೆ ಸಕಲ ಸಂತೋಷಗಳನ್ನೂ ನಿರಭ್ಯಂತರವಾಗಿ ಪಡೆಯುತ ಚಿರಕಾಲ ಸುಖವಾಗಿ ಬಾಳಿರಿ. ಎಲೈ ಕಾಳೀಯನೇ! ಈ

ಯಮುನಾನದಿಯು ಅನೇಕ ಪ್ರಾಣಿಗಳಿಗೂ, ಸಸ್ಯವರ್ಗಕ್ಕೂ ಆಧಾರವಾಗಿರುವುದರಿಂದ, ನೀನು ಕ್ಷಣಮಾತ್ರವೂ ಇಲ್ಲಿರಕೂಡದು. ನಿನ್ನ ಕುಟುಂಬದೊಂದಿಗೆ ಜಾಗಲೇ ತೆರಳು, ಸಮುದ್ರ ಮಧ್ಯದಲ್ಲಿರುವ ರಮಣಕದ್ವೀಪಕ್ಕೆ ಹೋಗು. ಅಲ್ಲಿಗೆ ಹೋಗುತ್ತಲೇ ನಿನ್ನ ಶಾಪವಿಮೋಚನವಾಗುವುದು. ನನ್ನ ಹೆಜ್ಜೆಗಳಗುರುತು ನಿನ್ನ ಹೆಡೆಗಳಮೇಲಿರುವುದರಿಂದ ನಿನಗಿನ್ನು ಗರುಡನ ಭಯವಿಲ್ಲವು. ಯಾವ ಪ್ರಾಣಿಗಾದರೂ ಎಂದಿಗೂ ಕೇಡುಬಗೆಯದೆ, ಸಾಧುಮಾರ್ಗದಿಂದ ಸುಖವಾಗಿಬಾಳು. ತೆರಳು!

(ಕಾಳೀಯನೂ, ಅವನ ಪತ್ನಿಯರೂ ಕೃಷ್ಣಮೂರ್ತಿಗೆ ನಮಸ್ಕರಿಸಿ ತೆರಳುವರು. ಕೃಷ್ಣನು ಗೋಪಾಲಕನಂದದಿ ಸಾಮಾನ್ಯರೂಪವನ್ನು ಧರಿಸಿ ಮಡುವಿನಿಂದೀಚೆಗೆ ಬರುವನು. ಯಶೋದೆಯೂ, ನಂದನೂ, ಗೋಪಿಯರೂ, ಗೋಪರೂ ಒಂದೇಧ್ವನಿಯಿಂದ ತಮ್ಮ ಸಂತೋಷವನ್ನು ಸೂಚಿಸುವರು.)

ಯಶೋದೆ:—ಮುದ್ದುಕುಮಾರಾ! ಮನ್ಮಥಾಕಾರಾ! ನನ್ನ ಭಾಗ್ಯದರಾಶಿಯೇ! ಬಾ! ಬಾ!

(ಎಂದು ಕೃಷ್ಣನನ್ನೆತ್ತಿಕೊಳ್ಳುವಳು.)

ಎಲ್ಲರೂ ಗೋಕುಲಕ್ಕೆ ತೆರಳುವರು.




ಕರುಣಾಸಮುದ್ರಾಯನಮಃ.



ಶ್ರೀರಸ್ತು.

# ಶ್ರೀ ಕೃಷ್ಣಲೀಲೆ.

## ಪಂಚಮಾಂಕಂ

### ಪ್ರಥಮರಂಗಂ.

**ಪ್ರದೇಶ— ಮಥುರಾಪುರದ ಮಾರ್ಗ.**

ನಾರದರು ಗೋಕುಲಕ್ಕೆಬಂದು ಶ್ರೀ ಕೃಷ್ಣಮೂರ್ತಿಯನ್ನು ಸಂದರ್ಶಿಸಿ, ಅಲ್ಲಿಂದ ಮಥುರಾಪುರವನ್ನು ಕುರಿತು ತೆರಳುವರು.

**ನಾರದ:—** ರಾಗ-ಆರಭಿ-ಏಕತಾಳ.

ಶ್ರೀ ಯದುಕುಲವಾರಿಧಿಚಂದ್ರ। ಸಕಲ ಸುಗುಣಸಾಂದ್ರ ಶ್ರೀ ॥ಪ॥ ಪರಮಕರುಣ ಶುಭಚರಣ ಮುನಿವಿನುತ ಶರಧಿಶಯನ ಸುರಸೇವಿತಮಹಿಮಾ ॥ ಶ್ರೀ ॥ಅ-ಪ॥ ಘೋರದುಃಖಪರಿಹಾರ ದನುಜಸಂಹಾರ ಸಜ್ಜನಾಧಾರ ನಿರ್ಮಲಾಕಾರ ಗೋಕುಲವಿಹಾರ ನಿತ್ಯಶಿವರಾಮಚಿತ್ತಸಂಚಾರಪರಾತ್ಪರ ॥ ಶ್ರೀ ॥

ಭಕ್ತವತ್ಸಲನಾದ ಭಗವಂತನು ಗೋಕುಲದಲ್ಲಿ ತೋರ್ಪಡಿಸುತ್ತಿರುವ ಲೀಲಾವಿಶೇಷಗಳನ್ನು ನೋಡಿ ಬ್ರಹ್ಮಾದಿಗಳುಕೂಡಾ ಚಕಿತರಾಗುತ್ತಿರುವರು. ಗೋಪಬಾಲಕರೊಂದಿಗೆ ತಾನೂ ಒಬ್ಬಗೋಪಾಲಕನಂದದಿ ಗೋವುಗಳನ್ನು ಮೇಯಿಸುವಂತೆ ನಟಿಸುತ್ತ ಬೃಂದಾರಣ್ಯದಲ್ಲಿರುವ ದುಷ್ಟರಕ್ಕಸರನ್ನು ಸಮಯೋಚಿತವಾಗಿ ಸಂಹರಿಸುತ್ತಿರುವನು. ಮೊಟ್ಟಮೊದಲು ಪೂತನೆಯನ್ನು ವಧಿಸಿದನು. ತದನಂತರ ಶಕಟಾಸುರ, ತೃಣಾವರ್ತ, ವತ್ಸಾಸುರ, ಬಕಾಸುರ, ಧೇನುಕಾಸುರರಾದಿಯಾಗಿ ದುಷ್ಟರಾಕ್ಷಸರನ್ನು ಸಂಹರಿಸಿದನು. ಭಯಂಕರ

ನಾದ ಕಾಳೀಯನನ್ನು ಮರ್ದಿಸಿ ಸಮುದ್ರಕ್ಕೆ ಹೊರಡಿಸಿದನು. ದಾವಾಗ್ನಿಯನ್ನು ನುಂಗಿ ಗೋವುಗಳನ್ನೂ ಗೋಪಸಂಘವನ್ನೂ ಕಾಪಾಡಿದನು. ಕ್ಷುದ್ರಪ್ರಾಜಾಗೂಢವಾದ ಇಂದ್ರಯಾಗವನ್ನು ನಿಲ್ಲಿಸಿ ಅಹಿಂಸಾಧರ್ಮವನ್ನು ಸ್ಥಾಪಿಸಿದನು. ಗೋವರ್ಧನಪರ್ವತವನ್ನು ಬೆರಳಿನಿಂದೆತ್ತಿ ದೇವೇಂದ್ರನ ಗರ್ವವನ್ನು ಭಂಗಪಡಿಸಿದನು. ಇಂತು ಗೋಪಾಲಬಾಲನೆಂದದಿ ಭಗವಂತನು ತೋರ್ಪಡಿಸುತ್ತಿರುವ ಲೀಲಾ ವಿನೋದಗಳು ಒಂದೊಂದೂ ಅತ್ಯದ್ಭುತವಾಗಿರುವುವು. ಸರ್ವಜ್ಞನಾದ ತಾನು ಶ್ರೀರಾಮಾವತಾರವನ್ನು ಧರಿಸಿ ಅರಣ್ಯವಾಸದಲ್ಲಿದ್ದಾಗ, ಸಚ್ಚಿದಾನಂದ ಸ್ವರೂಪನಾದ ತನ್ನನ್ನು ನೋಡಿ ಬ್ರಹ್ಮರ್ಷಿಗಳು ಸಹ ಭ್ರಮಿಸುವಂತೆ ರಾರಾಜಿಸಿದನು. ಆಗ ತನ್ನ ಸರ್ವಾಂಗ ಸೌಂದರ್ಯವನ್ನು ನೋಡಿ ಸಮ್ಮೋಹಿತರಾದ ಬ್ರಹ್ಮರ್ಷಿಗಳು, ತನ್ನನ್ನು ಆಲಿಂಗನ ಮಾಡಿಕೊಳ್ಳಬೇಕೆಂದು ಬಯಸಿದಾಗ, ಅವರ ಅಭೀಷ್ಟವು ಆಗ ಸಾಧ್ಯವಿಲ್ಲವೆಂತಲೂ, ತಾನು ಕೃಷ್ಣಾವತಾರವನ್ನು ಧರಿಸಿದಾಗ ಬ್ರಹ್ಮಋಷಿಗಳೆಲ್ಲರೂ ಗೋಕುಲದಲ್ಲಿ ಗೋಪಸ್ತ್ರೀಯರಾಗಿ ಹುಟ್ಟಬೇಕೆಂತಲೂ, ಹಾಗೆ ಹುಟ್ಟಿದಾಗ ಅವರ ಇಷ್ಟಾರ್ಥವನ್ನು ಸಫಲಗೊಳಿಸುವಂತೆಯೂ ವಾಗ್ದಾನಮಾಡಿದನು. ಅವರಂತೆಯೇ ಬ್ರಹ್ಮವೇತ್ತರಾದ ಋಷಿಮುನಿಗಳು ಈಗ ಗೋಪಿಯರಾಗಿ ಹುಟ್ಟಿರುವರು. ಶ್ರೀರಾಮಾವತಾರದಲ್ಲಿ ತಾನುಮಾಡಿದ ಪ್ರತಿಜ್ಞೆಯನ್ನು ನೆರವೇರಿಸುವುದಕ್ಕಾಗಿ ಸತ್ಯವ್ರತನಾದ ಭಗವಂತನು ಅತ್ಯಂತಪುಣ್ಯದಿವಸವಾದ ಮಾರ್ಗಶಿರ ಶುಕ್ಲಪಾಡ್ಯಮಿಯ ದಿವಸ, ಯಮುನಾಜಲದಲ್ಲಿ ಗೋಪಿಯರು ಮಂಗಳಸ್ನಾನ ಮಾಡುತ್ತಿರುವ ಸಮಯವನ್ನು ತಿಳಿದು, ಅವರ ವಸ್ತ್ರಗಳನ್ನಪಹರಿಸಿ, ನದೀತೀರದಲ್ಲಿರುವ ಕಡಗದ ಮರವನ್ನೇರಿ ಕುಳಿತನು. ಗೋಪಿಯರು ತಮ್ಮ ವಸ್ತ್ರಗಳನ್ನು ಕಾಣದೆ, ಸ್ವಲ್ಪಹೊತ್ತು ವಿಚಾರಮಗ್ನರಾಗಿದ್ದು, ಅದು ಕೃಷ್ಣನ ಕಾರ್ಯವೆಂದರಿತು, ವಸ್ತ್ರಗಳನ್ನು ಕೊಡೆಂದು ಬೇಡಲಾಗಿ ವಿಗಳಿತವಸ್ತ್ರರಾದ ಅವರಿಂದ ನಮಸ್ಕಾರಗಳನ್ನು ಪಡೆದು ವಸ್ತ್ರಗಳನ್ನನುಗ್ರಹಿಸಿದನು. ಭಗವಂತನ ದಿವ್ಯಸಂದರ್ಶನಾಪೇಕ್ಷೆಗಳಾದ ಬ್ರಹ್ಮನಿಷ್ಠರು ಅಜ್ಞಾನಾವರಣವನ್ನು ಪರಿತ್ಯಜಿಸಿದ ಹೊರತು, ಹೀಗೆ ಪರಮಾರ್ಥಸಿದ್ಧಿಯಾಗುವುದಿಲ್ಲವೋ, ಅದರಂತೆಯೇ

ಪರಬ್ರಹ್ಮಮೂರ್ತಿಯಾದ ತನ್ನ ಅಪ್ರಾಕೃತ ದಿವ್ಯಸಂದರ್ಶನವನ್ನು ಮಾಡಬೇಕೆಂದಪೇಕ್ಷಿಸಿದ ಗೋಪಿಯರ ವಸ್ತ್ರಗಳೆಂಬ ಅಜ್ಞಾನಾವರಣಗಳನ್ನು ಅಪಹರಿಸಿ, ಅವರಿಗೆ ತನ್ನ ಅಮಾನುಷವಾದ ಪರಂಜ್ಯೋತಿ ಸ್ವರೂಪಸಂದರ್ಶನವನ್ನು ಅನುಗ್ರಹಿಸಿ ತನ್ಮೂಲಕವಾಗಿ ಶ್ರೀರಾಮಾವತಾರದಲ್ಲಿ ತಾನು ಮಾಡಿದ್ದ ವಾಗ್ದಾನವನ್ನು ಸಫಲಗೊಳಿಸಿದನು. ಒಮ್ಮೆ ಅವರು ತಮ್ಮ ಪೂರ್ವಸ್ಮೃತಿಯುಂಟಾಗಿರುವರು. ಮತ್ತೊಮ್ಮೆ ಭಗವನ್ಮಾಯೆಗೆ ಸಿಲುಕಿ ಅದನ್ನು ಮರೆತು ಪರಿತಪಿಸುವರು. ಇಂತು ಬ್ರಹ್ಮರ್ಷಿಗಳಾದ ಗೋಪಿಯರ ಸ್ಥಿತಿಯೇ ಈರೀತಿಯಾಗಿರುವಲ್ಲಿ ಕೇವಲ ಆಹಾರನಿದ್ರಾದಿ ತುಚ್ಛಭೋಗಗಳಲ್ಲಿ ಮಗ್ನರಾಗಿರುವ ನರಪಶುಗಳಿಗೆ ದೈವಲೀಲೆಗಳು ಅರ್ಥವಾಗಬಲ್ಲವೆ ! ಪಾಂಡುರೋಗಿಯ ಕಣ್ಣಳಿಗೆ ಪ್ರಪಂಚವೆಲ್ಲವೂ ಹಳದಿಯಾಗಿ ಕಾಣುವಂತೆ, ಕೇವಲ ಲೌಕಿಕೈಶ್ವರ್ಯ ಮತ್ತರಿಗೂ, ಧನಾಧಿಕಾರ ಮದಾಂಧರಾದ ಡಾಂಬಿಕರಿಗೂ, ಭಗವದ್ವಿಲಾಸಗಳು ವಿಲಕ್ಷಣವಾಗಿ ಕಾಣುವುದರಲ್ಲಿ ಆಶ್ಚರ್ಯವೇನು? ನಿದರ್ಶನಕ್ಕೆ ಕಂಸನೊಬ್ಬನೇ ಸಾಕಾಗಿರುವನು. ಈ ದುರಭಿಮಾನಿಯು ಐಶ್ವರ್ಯದಲ್ಲಿಯೂ, ಅಧಿಕಾರದಲ್ಲಿಯೂ, ಪ್ರತಾಪದಲ್ಲಿಯೂ, ತಾನೇ ಅಗ್ರಗಣ್ಯನೆಂತಲೂ, ತನಗೆ ಸಮಾನವಾದ ತಿಳಿವಳಿಕೆ ಯುಂಟಾದವರು, ಮತ್ತಾರೂ ಇಲ್ಲವೆಂತಲೂ ಕೊಬ್ಬಿರುವನು. ತನ್ನ ವಿನಾಶಕಾಲವನ್ನರಿಯದೆ, ಋಷಿಮುನಿಗಳನ್ನೂ, ಬ್ರಹ್ಮವೇತ್ತರಾದ ಸಾಧುಜನರನ್ನೂ ಸಾಧ್ವೀಮಣಿಯರನ್ನೂ ಬಗೆಬಗೆಯಾಗಿ ದೂಷಿಸುತ್ತಲೂ, ದ್ವೇಷಿಸುತ್ತಲೂ ಉನ್ಮತ್ತನಾಗಿರುವನು. ತನ್ನ ತಂದೆಯನ್ನೇ ಸೆರೆಯಲ್ಲಿ ಬಂಧಿಸಿರುವನು. ಮೂರ್ಖನಾದ ಕಂಸನಿಗೆ ಲೇಶವಾದರೂ ವಿವೇಕವಿಲ್ಲವಲ್ಲಾ ! ಪ್ರಪಂಚದಲ್ಲಿ ಯಾವ ಮನುಷ್ಯನೇ ಆಗಲಿ, ತನ್ನ ಹಿರಿಯರನ್ನು ಅವಿವೇಕಿಗಳೆಂದು ತಾನು ಅಲ್ಲಗಳೆಯುವುದಾದರೆ ತನ್ನ ಮಕ್ಕಳು ಮೊಮ್ಮಕ್ಕಳು ಮುಂತಾದವರು ತನ್ನನ್ನು ವಜ್ರಕುಂಠನೆಂದು ದೂಷಿಸಲೇ ದೂಷಿಸುತ್ತಾರೆಂಬ ಪರಿಜ್ಞಾನವಿಲ್ಲದೆ ತನಗೆ ಎದುರಿಲ್ಲವೆಂದು ಗರ್ವಿಸಿ ಹಿರಿಯರಾದ ಋಷಿಮುನಿಗಳನ್ನು ದೂಷಿಸುತ್ತ ಹಾರಿಬೀಳುತ್ತಿರುವನು. ಆಗಲಾಗಲಿ! ಇವನ ವಿನಾಶಕಾಲವೂ ಕ್ಷಿಪ್ರದಲ್ಲಿಯೇ ಎದುರುನೋಡುತ್ತಿರುವುದಲ್ಲವೆ! “ವಿನಾಶಕಾಲೇ ವಿಪರೀತಬುದ್ಧಿಃ।” ಈ

ದುಷ್ಟಜಂತುಗಳ ನಿರ್ಮೂಲನಕ್ಕಾಗಿಯೇ ಭಗವಂತನವತರಿಸಿರುವನಲ್ಲವೆ! ಪರಂತು ಗೋಪಿಯರು ನನಗೆ ಚಿರಪರಿಚಿತರಾದ ಬ್ರಹ್ಮರ್ಷಿಗಳೆಂಬ ವಿಚಾರವನ್ನು ಈಗಾಗಲೇ ಅವರಿಗೆ ಸೂಚಿಸಬಾರದು. ಅವರು ತಮ್ಮ ಸ್ವರೂಪಜ್ಞಾನವನ್ನು ತಾವಾಗಿಯೇ ಅರಿತು, ಶ್ರೀಕೃಷ್ಣನು ಸಚ್ಚಿದಾನಂದಸ್ವರೂಪನಾದ ಭಗವಂತನೆಂದು ಪರಿಷ್ಕಾರವಾಗಿ ತಿಳಿದಮೇಲೆ ಅವರನ್ನು ನಾನು ಕಾಣಿಸಿಕೊಳ್ಳುವೆನು. ಪ್ರಕೃತದಲ್ಲಿ ಗೋಕುಲದ ಯೋಗಕ್ಷೇಮವನ್ನು ದೇವಕೀವಸುದೇವರಿಗೆ ತಿಳಿಸುವೆನು.

[ಎಂದು ನಾರದರು ನಿಷ್ಕ್ರಮಿಸುವರು.]

## ಪಂಚಮಾಂಕಂ—ದ್ವಿತೀಯರಂಗಂ.

### ಪ್ರದೇಶ—ಬೃಂದಾವನ.

ಬೃಂದಾವನದಲ್ಲಿ ಗೋವುಗಳನ್ನು ಮೇಯಿಸುತ್ತಿದ್ದ ಗೋಪಾಲಕರು ಹಸಿವಿನಿಂದಲೂ, ಬಾಯಾರಿಕೆಯಿಂದಲೂ ಪೀಡಿತರಾಗಿ ಕೃಷ್ಣನೊಂದಿಗೆ ಮೊರೆಯಿಡುವರು.

ಗೋಪಾಲಕರು:—ಕೃಷ್ಣಾ! ಮಧ್ಯಾಹ್ನವಾಗುತ್ತ ಬಂದಿತು. ನಾವು ತಂದಿದ್ದ ತಂಗಳು ಬುತ್ತಿಗಳನ್ನು ದಾರಿಗರಾದ ವೃದ್ಧರಿಗೆ ಕೊಡಿಸಿಬಿಟ್ಟೆ. ನಾವೆಲ್ಲರೂ ಕ್ಷುತ್ಪಿಪಾಸೆಗಳಿಂದ ಬಳಲುತ್ತಿರುವೆವು. ಮನೆಗಳಿಗಾದರೂ ಈಗಲೇ ಹೋಗೋಣವೆಂದರೆ ಬಹಳ ದೂರದಲ್ಲಿರುವುವು. ಹಸಿವಿನ ವೇದನೆಯನ್ನು ತಡೆಯಲಾರೆವು. ಈಗ ಮಾಡತಕ್ಕುದೇನು?

ಶ್ರೀಕೃಷ್ಣ:—ಆಹ! ಮನುಷ್ಯಮಾತ್ರರು ಕ್ಷುತ್ಪಿಪಾಸೆಗಳನ್ನು ತಡೆಯಲಾರರು. ಈ ಗೋಪಾಲಕರು ತೀವ್ರವಾದ ಹಸಿವಿನಿಂದಲೂ ತೃಷೆಯಿಂದಲೂ ಪೀಡಿಸಲ್ಪಡುತ್ತಿರುವರು. ಇವರಿಗೀಗಲೇ ಅನ್ನಪಾನಗಳನ್ನು ಒದಗಿಸಿ ಕೊಡಬೇಕು.

ಗೋಪಾಲಕರು ಕೆಲವರು:—ಕೃಷ್ಣಾ! ಹಸಿವು! ಹಸಿವು!!

ಮತ್ತೆ ಕೆಲವರು:—ಕೃಷ್ಣಾ! ಬಾಯಾರಿಕೆ.

ಶ್ರೀಕೃಷ್ಣ:—ಗೋಪಾಲಕರೇ! ಸ್ವಲ್ಪ ತಾಳಿರಿ. ಅಗೋ! ನೋಡಿರಲ್ಲೊಂದು ಋಷ್ಯಾಶ್ರಮವು ಕಾಣುತ್ತಿದೆ. ಎಲ್ಲರೂ ನಡೆಯಿರಿ.

ಅಲ್ಲಿಗೆ ಹೋಗುವ. ಆಶ್ರಮದಲ್ಲಿ ಋಷಿಗಳನ್ನು ಕೇಳಿದರೆ ನಿಮಗೆ ಅನ್ನವು ಲಭಿಸುವುದು.

[ಎಲ್ಲರೂ ತೆರಳುವರು.]

ಪ್ರದೇಶ:— ಸುಮಂತಾಶ್ರಮ.

[ಮಹರ್ಷಿಯಾದ ಸುಮಂತನು ದರ್ಭಾಸನದಮೇಲೆ ಕುಳಿತು ಶಿಷ್ಯರಿಗೆ ನಾರಾಯಣಸೂಕ್ತವನ್ನು ಪಾಠಹೇಳುತ್ತಿರುವನು. ಸುಮಂತನ ಪತ್ನಿಯಾದ ಸುಶೀಲಾದೇವಿಯು ಮುನಿಕನ್ಯೆಯರೊಡನೆಮಾತನಾಡುತ ಪಾಕಮಾಡುತ್ತಿರುವಳು.]

ಶ್ರೀಕೃಷ್ಣಾದಿ ಗೋಪಾಲಕರು ಆಶ್ರಮದ ಪ್ರಾಂತ್ಯವನ್ನು ಪ್ರವೇಶಿಸುವರು.

ಶ್ರೀಕೃಷ್ಣ:—ಎಲೈ ಗೋಪಾಲಕರಿರಾ ! ನಿಮ್ಮಲ್ಲಿ ಯಾರಾದರೊಬ್ಬರು ಆಶ್ರಮಕ್ಕೆ ಹೋಗಿ, ಅಲ್ಲಿರುವ ಋಷಿಗಳನ್ನು ಕಂಡು ವಿನಯದಿಂದ ನಮಸ್ಕರಿಸಿ, ಗೋಕುಲದಿಂದ ಬಲರಾಮನೂ, ಕೃಷ್ಣನೂ ಮತ್ತೆ ಕೆಲವು ಗೋಪಾಲಕರೂ ಬಹಳವಾಗಿ ಹಸಿದು ಬಂದಿರುವೆವು. ನಮಗೆ ದಯವಿಟ್ಟು ಅನ್ನಪಾನಗಳನ್ನು ಕೊಡಬೇಕೆಂದು ಕೇಳಿರಿ. ಅವರು ಕೊಡದಪಕ್ಷಕ್ಕೆ ಅವರ ಪತ್ನಿಯರಾದ ಸ್ತ್ರೀಯರನ್ನು ಕೇಳಿರಿ. ಹೋಗಿ ಬನ್ನಿರಿ.

[ಗೋಪಾಲಕರು ಅಲ್ಲಿಂದ ಹೊರಟು ಆಶ್ರಮವನ್ನು ಹೊಕ್ಕು ಒಳಗೆ ಹೋಗುವರು.]

**ಸುಮಂತ:**— "ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಂ। ನಾರಾಯಣ ಪರೋಜ್ಯೋತಿರಾತ್ಮಾನಾರಾಯಣಃಪರಃ। ನಾರಾಯಣಪರಂ ಬ್ರಹ್ಮತತ್ವಂನಾರಾಯಣಃಪರಃ। ನಾರಾಯಣಪರೋಧ್ಯಾತಾಧ್ಯಾನಂ ನಾರಾಯಣಃಪರಃ ॥

]ಗೋಪಾಲಕರು ಪ್ರವೇಶಿಸುವರು.]

ಗೋಪಾಲಕರು:—ಪೂಜ್ಯರಿಗೆ ವಂದಿಸುವೆವು.

ಸುಮಂತ:—ನೀವು ಯಾರು ? ಎಲ್ಲಿಂದ ಬಂದಿರಿ ?

ಗೋಪಾಲಕರು:—ನಾವು ಗೋಕುಲವಾಸಿಗಳು. ಗೋಕುಲ ದರಸನಾದ ನಂದಗೋಪನ ಹೆಸರನ್ನು ತಾವು ಕೇಳಿರಬಹುದು.

ಸುಮಂತ:—ಪ್ರಕೃತವಿಚಾರವೇನು ?

ಗೋಪಾಲಕರು:—ನಂದಗೋಪನ ಪುತ್ರರಾದ ರಾಮಕೃಷ್ಣರೂ ಮತ್ತೆ ಕೆಲವು ಮಂದಿ ಗೋಪಾಲಕರೂ ಬಹಳವಾಗಿ ಹಸಿದುಬಂದಿರುವೆವು. ದಯವಿಟ್ಟು ನಮಗೆ ಆಹಾರವನ್ನು ಕೊಡಬೇಕಾಗಿ ಪ್ರಾರ್ಥಿಸುವೆವು.

ಸುಮಂತ:—ಇನ್ನೂ ದೇವರ ಪೂಜೆಯಾಗಲಿಲ್ಲ. ದೇವರಿಗೆ ನೈವೇದ್ಯವಾದಹೊರತು ಯಾರಿಗೂ ಹಾಕುವುದಿಲ್ಲ.

[ಗೋಪಾಲಕರು ಪಾಕಶಾಲೆಯ ಬಳಿಗೆ ಪೋಗಿ ಋಷಿಪತ್ನಿಯನ್ನು ಕೇಳುವರು.]

ಗೋಪಾಲಕರು:—ಅಮ್ಮಾ ಭಾಗ್ಯವತಿಯರೇ !

ಸುಶೀಲೆ:—(ಹೊರಗೆ ಬಂದು) ನೀವು ಯಾರಪ್ಪಾ ? ಎಲ್ಲಿಂದ ಬಂದಿರಿ ? ಈ ನೆರಳಿನಲ್ಲಿ ಕೂಡಿರಿ.

ಗೋಪಾಲಕರು:—(ತಮ್ಮಲ್ಲಿ) ಈಕೆ ಪರಮ ಪುಣ್ಯಾತ್ಮಳಾಗಿ ಕಾಣುವಳು. ಈ ತಾಯಿಯು ನಮಗೆ ಅನ್ನಾಹಾರಗಳನ್ನು ಕೊಡ ಬಹುದೆಂದು ಕಾಣುವುದು. ತಾಯೇ ! ನಮ್ಮದು ಗೋಕುಲವು.

ಸುಶೀಲೆ:—ಗೋಕುಲವೆ ?

ಗೋಪಾಲಕರು:—ಅಹುದಮ್ಮ.

ಸುಶೀಲೆ:—ಬಹಳ ಸಂತೋಷ !

ಗೋಪಾಲಕರು:—ನಂದಗೋಪನ ಕುಮಾರರಾದ ರಾಮಕೃಷ್ಣ ರೂ ಮತ್ತೆ ಕೆಲವು ಗೋಪಾಲಕರೂ ಬಹಳವಾಗಿ ಹಸಿದು ಬಂದಿರು ವೆವು. ನಮಗೆ ಅನ್ನೋದಕಗಳನ್ನು ಕೊಟ್ಟು ರಕ್ಷಿಸಬೇಕಮ್ಮ !

ಸುಶೀಲೆ:—ಏನು ? ಶ್ರೀಕೃಷ್ಣಮೂರ್ತಿಯು ಬಂದಿರುವನೆ ?

ಗೋಪಾಲಕರು:—ಬಂದಿರುವನಮ್ಮ !

ಸುಶೀಲೆ:—ತಂಗೀ ಅರುಣೆ !

ಅರುಣೆ:—ಅಗ್ರಜಳೇ ವಿಶೇಷವೇನು ?

ಸುಶೀಲೆ:—ಅಡಿಗೆ ಸಿದ್ಧವಾಗಿರುವಷ್ಟೇ ಸಾಕು. ಈಗ ಏನೇನಾಗಿರುವುದೋ ಅವುಗಳನ್ನೆಲ್ಲಾ ತಟ್ಟೆಗಳಲ್ಲಿಡು. ಶ್ರೀಕೃಷ್ಣಮೂರ್ತಿಯು ಬಂದಿರುವನಂತೆ. ನಮ್ಮ ಭಾಗ್ಯವೇ ಭಾಗ್ಯವು. ರಾಮಕೃಷ್ಣರಿಗೆ ಅನ್ನೋದಕಗಳನ್ನು ಕೊಟ್ಟು ಕೃತಾರ್ಥರಾಗುವ.

ಅರುಣೆ:—ಇಗೋ ! ನಿಮಿಷದಲ್ಲಿ ಸಿದ್ಧಪಡಿಸಿ ತರುವೆನು.

[ಸುಶೀಲೆಯೂ, ಅರುಣೆಯೂ ಅನ್ನೋದಕಗಳನ್ನು ತೆಗೆದುಕೊಂಡು ಗೋಪಾಲಕರೊಂದಿಗೆ ಹೊರಡುವರು.]

ಸುಮಂತ:—ಯಾರದು ?

ಸುಶೀಲೆ:—ಏಕೆ ?

ಸುಮಂತ:—ಎಲ್ಲಿಗೆ ಹೋಗುವಿರಿ ?

ಸುಶೀಲೆ:—ಅತಿಥಿ ಸತ್ಕಾರಕ್ಕೆ !

ಸುಮಂತ:—ಯಾರದು, ಅತಿಥಿಗಳು !

ಸುಶೀಲೆ:—ನಾಥಾ ! ಯಾರಾದರೇನು ?

ಶ್ಲೋ॥ ಆದೌರೂಪವಿನಾಶಿನೀಕೃಶಕರೀ ಶಾಂತಾಂಕುರಚ್ಛೇದಿನೀ । ಪುತ್ರಭ್ರಾತೃಕಳತ್ರಭೇದನಕರೀಗರ್ವಾಂಕುರಚ್ಛೇದಿನೀ । ಧೈರ್ಯಂಮಂದಕರೀತಪಃಕ್ಷಯಕರೀಧರ್ಮಸ್ಯನಿರ್ಮೂಲಿನೀ । ಸಾಮಾಂಸಂಪ್ರತಿಸರ್ವರೋಗಜನನೀಪ್ರಾಣಾಪಹಂತ್ರೀಕ್ಷುಧಾ ॥

ಪ್ರಾಣಿಕೋಟಿಗಳನ್ನು ಪೀಡಿಸುವುದರಲ್ಲಿ ಹಸಿವು ತೀವ್ರವಾದ ಶಕ್ತಿಯುಂಟಾದುದು, ಶರೀರವನ್ನು ದುರ್ಬಲಪಡಿಸುವುದು. ಸ್ನಾನಪಾನಗಳಿಗವಕಾಶಕೊಡದೆ ಆತುರಗೊಳಿಸುವುದು, ಶಾಂತವನ್ನು ಭೇಧಿಸಿ ಕೋಪವನ್ನುಂಟುಮಾಡುವುದು, ಬಂಧುಮಿತ್ರರೆಂಬ ದಾಕ್ಷಿಣ್ಯವನ್ನು ಹೋಗಲಾಡಿಸುವುದು, ಗರ್ವವನ್ನು ಮುರಿಯುವುದು, ಧೈರ್ಯವನ್ನು ಕುಂದಿಸುವುದು, ತಪವನ್ನು ವಿಘ್ನಪಡಿಸುವುದು, ಧರ್ಮವನ್ನು ನಿರ್ಮೂಲಮಾಡುವುದು, ಸಮಸ್ತ ರೋಗಗಳಿಗೂ ಮೂಲಕಾರಣವಾಗುವುದು, ಕಡೆಗೆ ಮರಣವನ್ನು ಸಹಾ ಉಂಟುಮಾಡುವುದು. ಇಂತಹ ಅನಿವಾರ್ಯ

ವಾದ ಹಸಿವಿನಿಂದ ಪೀಡಿಸಲ್ಪಡುತ್ತಿರುವ ಪ್ರಾಣಿಗಳು ಮನೆಬಾಗಲಿಗೆ ಬಂದಾಗ ಮನೆ ಯಜಮಾನರಾದವರು ತಮ್ಮ ಶಕ್ತ್ಯಾನುಸಾರವಾಗಿ ಸತ್ಕರಿಸಿ ಕಳುಹಿಸಬೇಕು. ಹಾಗಲ್ಲದೆ ಅತಿಥಿಗಳನ್ನು ನಿರಾಕರಿಸಿ ಕಳು ಹಿಸಬಾರದು. ಅನ್ನಾರ್ಥಿಗಳಾಗಿ ಮನೆಗೆ ಬಂದ ಅತಿಥಿಗಳನ್ನು ಯಾವ ಮನೆಯವರು ಇಲ್ಲವೆಂದು ನಿರಾಕರಿಸುವರೋ ಆ ಮನೆಯ ಯಜ ಮಾನರು ರೌರವಾದಿ ನರಕಭಾಜನರಾಗುವರು. ಅತಿಥಿಗಳನ್ನು ಬಿಟ್ಟು ಯಾರು ತಾವ್ರೊಬ್ಬರೇ ಭುಂಜಿಸುವರೋ ಅಂಥವರು ಭುಂಜಿಸತಕ್ಕ ಅನ್ನವು ಗೋಮಾಂಸಕ್ಕೆ ಸಮಾನವೆಂತಲೂ, ಆಪೋಶನವು ಸುರಾ ಪಾನಕ್ಕೆ ಸಮಾನವೆಂತಲೂ, ಧರ್ಮಶಾಸ್ತ್ರಗಳು ಸಾರುತ್ತಿರುವುವು. ಆದುದರಿಂದ ನಮ್ಮನ್ನು ತಡೆಯಬೇಡಿರಿ. ಈ ಪದಾರ್ಥಗಳನ್ನು ಶ್ರೀ ಕೃಷ್ಣಾದಿಗಳಿಗೆ ಸಮರ್ಪಿಸಿ ಬೇಗನೆ ಬರುವೆವು.

ಸುಮಂತ:—(ಕೋಪದಿಂದ) ಏನು ? ದೇವರ ನೈವೇದ್ಯಕ್ಕಿಂತ ಲೂ ಮೊದಲೇ ಅವರಿಗೆ ಹಾಕಬೇಕೋ ?

ಸುಶೀಲೆ:—ಹಾ ! ಎಂತಹಮಾತನ್ನಾಡಿದಿರಿ. ಮಂತ್ರಮೂರ್ತಿ ಯೂ, ಧರ್ಮರಕ್ಷಕನೂ, ಯಜ್ಞಪುರುಷನೂ, ವಿಶ್ವನಾಥನೂ ಆದ ಶ್ರೀಕೃಷ್ಣಮೂರ್ತಿಯು ಪ್ರತ್ಯಕ್ಷವಾಗಿ ಬಂದಿರುವಲ್ಲಿ ಆತನನ್ನು ಪೂಜಿ ಸುವುದೇ ನಿಜವಾದ ದೇವರ ಪೂಜೆಯು. ಯಾರ ಅನುಗ್ರಹಕ್ಕಾಗಿ ಮಂತ್ರ ತಂತ್ರ ಪಠನಪಾಠನಾದಿಗಳೆಲ್ಲವೂ ಏರ್ಪಟ್ಟಿರುವುವೋ ಅಂತಹ ಪ್ರಭು ವೇ ಪ್ರಸನ್ನನಾಗಿರುವಲ್ಲಿ ಆತನಿಗಲ್ಲದೆ ಮತ್ತಾರಿಗೆ ನೈವೇದ್ಯಮಾಡುವಿರಿ? ನಿಮ್ಮ ಭ್ರಾಂತಿಯು ಪರಿತಾಪಕರವಾಗಿದೆ.

[ಎಂದು ಹೇಳುತ್ತ ಸುಶೀಲೆಯೂ, ಅರುಣೆಯೂ ಅನ್ನೋದಕಗ ಳೊಂದಿಗೆ ತೆರಳುವರು.]

ಪ್ರದೇಶ:— ಆಶ್ರಮದ ಮುಂಭಾಗ.

[ಸುಶೀಲೆಯೂ, ಅರುಣೆಯೂ ಪ್ರವೇಶಿಸಿ ಶ್ರೀಕೃಷ್ಣಮೂರ್ತಿ ಗೆ ನಮಸ್ಕರಿಸಿ ತಾವು ತಂದಿದ್ದ ಪದಾರ್ಥಗಳನ್ನು ಸಮರ್ಪಿಸುವರು.]

ಶ್ರೀಕೃಷ್ಣ:—ಸಾಧ್ವೀಮಣಿಯರೆ ! ನಿಮ್ಮೆಲ್ಲರಿಗೂ ಕುಶಲವೆ ? ನಿಮ್ಮ ಗೃಹಕಾರ್ಯಗಳು ಸಂತೋಷಕರವಾಗಿ ನಡೆಯುವುವೆ ? ನಿಮ್ಮ

ಪತಿಗಳು ಕ್ಷೇಮವಾಗಿರುವರೆ ? ನಿಮ್ಮ ಮಕ್ಕಳು ಆರೋಗ್ಯವಾಗಿರುವರೆ ? ನಮಗಾಗಿ ಬಹಳ ಶ್ರಮೆಪಟ್ಟು ಬಂದಿರಲ್ಲಾ !

ಸುಶೀಲೆ:—

ಸೀ॥ ಇಂದೀವರಶ್ಯಾಮವಂದಿತಸುತ್ರಾಮ ಕರುಣಾಲವಾಲ ಭಾಸುರಕಪೋಲ ।
ನವಪದ್ಮಲೋಚನ ಭವಬಂಧಮೋಚನ ಭರಿತಶುಭಾಕಾರ ದುರಿತದೂರ ।
ಆಶ್ರಿತಮಂದಾರ ಆದ್ಯಂತವಿರಹಿತ ವೇದಾಂತಗೋಚರ ವಿಪುಲಸಾರ ।
ಖಗಕುಲಾಧಿಪಯಾನಕೌಶೇಯಪರಿಧಾನ ನತಗುಣಗಂಭೀರನಾಗಶಯನ ॥

ಗೀ॥ ಮಕರಕುಂಡಲ ಸದ್ಭೂಷಮಂಜುಭಾಷ । ನಿರುಪಮಾಕಾರ ಕ್ಷೀರಸಾಗರ ವಿಹಾರ । ಭೂರಿಗುಣಸಾಂದ್ರ ಯದುಕುಲಾಂಭೋದಿಚಂದ್ರ । ಕೃಷ್ಣ ಶ್ರೀಕೃಷ್ಣಜಗದೇಕಸಾರ್ವಭೌಮ ॥

ಪರಮಾತ್ಮನೆ ! ಯಜ್ಞಯಾಗ ಜಪತಪಾದಿಗಳೆಲ್ಲವೂ ಯಾರನ್ನು ಕುರಿತು ಮಾಡಲ್ಪಡುವುವೋ ಅಂತಹ ಸರ್ವೇಶ್ವರನಾದ ನಿನ್ನ ಕೃಪಾಕಟಾಕ್ಷವಿರುವಲ್ಲಿ ನಮಗೆ ಸಂತೋಷಕ್ಕೇನು ಕಡಿಮೆ ? ಭಗವಂತನೇ ನಿನ್ನ ಅವ್ಯಾಜಾನುರಾಗದಿಂದ ನಾವೆಲ್ಲರೂ ಕ್ಷೇಮವಾಗಿರುವೆವು.

ಶ್ರೀಕೃಷ್ಣ:—ನಾರೀಮಣಿಯರೆ! ಆತ್ಮಾನಾತ್ಮಪರಿಜ್ಞಾನವನ್ನು ಚೆನ್ನಾಗಿ ಬಲ್ಲವರಾದ ನಿಮಗೆ ನಾನೇನು ಹೇಳಬಲ್ಲೆನು. ನಿಮ್ಮ ಹಸ್ತಗಳಿಂದಲೇ ನಮ್ಮೆಲ್ಲರಿಗೂ ಈ ಅನ್ನವನ್ನು ಬಡಿಸಿರಿ.

[ಎಂದು ಸೂಚಿಸಿ ಶ್ರೀಕೃಷ್ಣನು ಗೋಪಾಲಕರನ್ನೆಲ್ಲಾ ಸುತ್ತಲೂ ಕೂಡಿಸಿ ತಾನು ಮಧ್ಯದಲ್ಲಿ ಬಲರಾಮನೊಂದಿಗೆ ಕೂಡುವನು. ಸುಶೀಲಾದೇವಿಯೂ ಅರುಣಾದೇವಿಯೂ ಎಲ್ಲರಿಗೂ ಬಡಿಸುವರು. ಎಲ್ಲರೂ ತೃಪ್ತಿಕರವಾಗಿ ಭುಂಜಿಸಿ ಯಮುನೆಯಲ್ಲಿ ಕೈಕಾಲುಗಳನ್ನು ಶುದ್ಧಿಮಾಡಿಕೊಳ್ಳುವರು.]

ಶ್ರೀಕೃಷ್ಣ:—ಪಾವನ ಚರಿತ್ರೆಯರಾದ ಮುನಿಪತ್ನಿಯರೆ ! ನಿಮ್ಮ ದಯಾಗುಣವು ಪ್ರಶಂಸನೀಯವಾದುದು. ನೀವಿನ್ನು ಆಶ್ರಮಕ್ಕೆ ತೆರಳಿ ನಿಮ್ಮ ಪತಿಗಳೊಂದಿಗೆ ಸುಖವಾಗಿ ಬಾಳಿರಿ. ಕಾಲಕ್ರಮದಲ್ಲಿ ನಿಮಗೆ ಮಹೋನ್ನತವಾದ ಪರಮಾರ್ಥಸಿದ್ಧಿಯುಂಟಾಗುವುದು.

ಸುಶೀಲೆ, ಅರುಣೆ:—ಮಹದಾಜ್ಞೆ !

[ಎಂದು ಕೈಮುಗಿದು ವಂದಿಸುವರು.]

ಋಷಿಪತ್ನಿಯರು ಆಶ್ರಮವನ್ನು ಕುರಿತೂ, ಶ್ರೀಕೃಷ್ಣಾದಿಗಳು ಗೋಕುಲವನ್ನು ಕುರಿತೂ ತೆರಳುವರು.

## ಪಂಚಮಾಂಕಂ:—ತೃತೀಯರಂಗಂ.

### ಪ್ರದೇಶ:—ಯಮುನಾತೀರ.

ಗೋಪಿಯರೆಲ್ಲರೂ ಪರಿಶುದ್ಧ ಮನಸ್ಕರಾಗಿ ಗೌರೀವ್ರತವನ್ನಾಚರಿಸುವರು.





ಚಾರುಮತಿ:—ಗೆಳತಿಯರೇ! ಪವಿತ್ರವಾದ ಯಮುನಾ ಜಲದಲ್ಲಿ ನಾವೆಲ್ಲರೂ ಮಂಗಳಸ್ನಾನವನ್ನಾಚರಿಸಿ ಏಕಚಿತ್ತ ಮನೋಭಾವದಿಂದ, ಕಾತ್ಯಾಯನೀ ದೇವಿಯನ್ನಾರಾಧಿಸುವೆವಾದರೆ ನಮ್ಮ ಸಂಕಲ್ಪವು ಸಫಲವಾಗುವುದು.

ನಂದಿನಿ:—ಇದೀಗ ನಿಜವಾದ ಮಾತು. ಸರ್ವಮಂಗಳೆಯಾದ ಪಾರ್ವತೀ ದೇವಿಯು, ತನ್ನ ಅಚಂಚಲವಾದ ಭಕ್ತಿಯಿಂದ ಧ್ಯಾನಿಸಿಯಲ್ಲವೇ ಚಂದ್ರಶೇಖರನ ಅರ್ಧಾಂಗವನ್ನಲಂಕರಿಸಿದಳು! ಆ ದೇವಿಯನ್ನುದ್ದೇಶಿಸಿ ನಾವು ದೃಢಭಕ್ತಿಯಿಂದ ವ್ರತವನ್ನಾಚರಿಸುವುದರಿಂದ ನಮ್ಮೆಲ್ಲರಿಗೂ ಶ್ರೇಯಸ್ಸುಂಟಾಗುವುದು, ಜಗನ್ಮಾತೆಯಾದ ಶರ್ವಾಣಿಯ ಕೃಪಾಕಟಾಕ್ಷದಿಂದ ನಮ್ಮ ಕಾರ್ಯವು ಕೈಗೂಡುವುದು.

[ಎಂದು ನಿಶ್ಚಯಿಸಿ ಗೋಪಿಯರೆಲ್ಲರೂ ಯಮುನಾ ಜಲದಲ್ಲಿ ಸ್ನಾನವಮಾಡಿ ದೃಢವಾದ ಭಕ್ತಿಯಿಂದ ಗೌರೀಪೂಜೆಗಾರಂಭಿಸುವರು.]

ಗೋಪಿಯರು:— ರಾಗ–ಕಲ್ಯಾಣಿ–ಜಂಪೆ.

ನಮೋಭಕ್ತಸುರತರುಲತೇದೇವಿಲಲಿತೇ ॥ ಪ ॥

ತ್ರಿಪುರಸುಂದರಿಕೃಪಾಪಾಂಗಲಲಿತೇ । ಚಂದ್ರಚೂಡಃಪ್ರಿಯೇಚಂಪ್ರತಿಲಕಾಲಿಕೇ, ಚಂದ್ರಮುಖಿಚಂದ್ರಿಕಾಮಂದಹಾಸೇ । ಕುಂದಸುಂದರರದನ ಬಂಧುಜೀವಾಧರೇಕೋಟಿವಿದ್ಯುಲ್ಲತಾಬೃಂದಭಾಸೇ ॥ ನಮೋಭಕ್ತ ॥

ದರದಲಿತಕಮಲಮುಕುಲೋಚ್ಚಲಿತ ಮದಕಲಿತವಿಲಸದಲಿ ಲಲಿತ ಲೋಚನವಿಶಾಲೇ। ಅಧರರಾಗಾರುಣೇದಯ. ವಿಧೃತದೈತ್ಯಗುರು ರುಚಿರುಚಿರಮೌಕ್ತಿಕೋಲ್ಲಸಿತನಾಸೇ ॥ ನಮೋಭಕ್ತ ॥

ಹಂಸಗಮನೇ ಸಕಲನಿಗಮವನಶಾರಿಕೇ ಹಂಸಮುನಿಹಂಸಮಾನಸಮರಾಳೀ ! ಕಂಸರಿಪುಸೋದರೀಕಾಮಿತಾರ್ಥಪ್ರದೇ ತ್ವಾಂಶರಣ್ಯಂ ಕಾಳಿದಾಸ ವರದೇ ॥ ನಮೋಭಕ್ತ ॥*

ಜಗಜ್ಜನನೀ ! ಜಗದ್ವಂದ್ಯಮಾನಚರಣಸರಸೀರುಹೇ! ವಾಮದೇವಾರ್ಧಶರೀರೇ ! ಪೂರ್ಣಚಂದ್ರಕೋಟಿಕೋಟಿನಿಭಾನನೇ ! ಪದ್ಮರಾಗವಿರಾಜಮಾನಕರ್ಣಿಕೇ ! ನಿಖಿಲಮಣಿಗಣಕಿರಣಕೇಸರಸಮುದಯೇ ! ಸುಗಂಧಬಂಧುರೇ ! ಇಚ್ಛಾ–ಜ್ಞಾನ–ಕ್ರಿಯಾಶಕ್ತಿಸ್ವರೂಪೇ ! ಸಕಲಕಲ್ಯಾಣಗುಣಾಭರಣೇ! ಸರ್ವಮಂಗಳೇ ! ಭಕ್ತವತ್ಸಲೇ ! ಶ್ರೀ ! ಲಕ್ಷ್ಮೀ ! ಚಪಲೇ ! ಅಂಬಿಕೇ !

ವಿಜಯೇ ! ಜಯೇ ! ನಿನ್ನ ಪಾದಾರವಿಂದಗಳಿಗನಂತ ಕೋಟಿ ನಮಸ್ಕಾರಗಳು ! ದೇವೀ ! ಶ್ರೀಕೃಷ್ಣಮೂರ್ತಿಗೆ ನಮ್ಮಲ್ಲಿ ನಿಷ್ಕಳಂಕವಾದ ಪ್ರೇಮವುಂಟಾಗುವಂತೆ ಅನುಗ್ರಹಿಸು.

[ಎಂದೆಲ್ಲರೂ ನಮಸ್ಕರಿಸುವರು.]

ಗೌರಿ:––ಗೋಪಿಯರೇ! ನಿಮ್ಮ ಭಕ್ತಿಗೆ ಮೆಚ್ಚಿದೆನು. ಶ್ರೀಪತಿಯು ನಿಮ್ಮ ತಾಪವನ್ನು ಕ್ಷಿಪ್ರದಲ್ಲಿಯೇ ಪರಿಹರಿಸುವನು. ನೀವು ಕೃಷ್ಣ ಪರಮಾತ್ಮನಲ್ಲಿ ಏಕಾಂತ ಭಕ್ತಿಯನ್ನಾಚರಿಸಿರಿ ! ಈ ಕುಂಜವನ ದಲ್ಲಿಯೇ ನಿಮಗೆ ಶ್ರೀಕೃಷ್ಣಸಂದರ್ಶನವು ಲಭಿಸುವುದು !

---

* ಈ ಅಂಬಾಸ್ತೋತ್ರವು ಕಾಳಿದಾಸ ವಿರಚಿತವು. ಈ ಮಹಾ ಕವಿಯು ಜಗದಂಬೆಯಾದ ಪಾರ್ವತಿಯ ಅನುಗ್ರಹವನ್ನು ಪ್ರತ್ಯಕ್ಷವಾಗಿ ಪಡೆದವನು. ಈ ಸಂದರ್ಭದಲ್ಲಿ ಮನಃಪೂರ್ವಕವಾದ ನನ್ನ ಧನ್ಯವಾದಗಳನ್ನು ಈ ಕವಿಕುಲತಿಲಕನಿಗೆ ಸಮರ್ಪಿಸಬೇಕೆಂತಲೇ ಈ ಸ್ತೋತ್ರವನ್ನಿಲ್ಲಿ ಸಂಗ್ರಹಿಸಿರುವೆನು. (ಗ್ರಂಥಕರ್ತ.)

[ಎಂದು ಗೌರಿಯು ಅಶರೀರವಾಣಿಯಾಗಿ ಅಭಯವನ್ನು ಕೊಡು ವಳು.]

ಗೋಪಿಯರು:—(ಸಂತೋಷದಿಂದ) ಜಗನ್ಮಾತೆಯೇ! ನಿನ್ನಾಜ್ಞೆಯಂತೆ ನಡೆಯುವೆವು.

[ಎಂದೆಲ್ಲರೂ ಪುನಃ ಕೈಮುಗಿದು ವಂದಿಸುವರು.]

ನಂದಿನಿ:—ಭಗವತಿಯೇನೋ ಅನುಗ್ರಹಿಸಿದಳು. ಆದರೆ ಈಗೊಂದು ನೂತನ ಸಂಶಯವುಂಟಾಗಿರುವುದಲ್ಲಾ!

ಕೆಲವು ಮಂದಿ ಗೋಪಿಯರು:—ಏನದು?

ನಂದಿನಿ:—ನೀವೆಲ್ಲರೂ ಕೃಷ್ಣಪರಮಾತ್ಮನಲ್ಲಿ ಏಕಾಂತ ಭಕ್ತಿಯನ್ನಾಚರಿಸಿರೆಂದಲ್ಲವೇ ದೇವಿಯ ಅಪ್ಪಣೆಯು!

ಗೋಪಿಯರು:—ಅಹುದು!

ನಂದಿನಿ:—ಏಕಾಂತ ಭಕ್ತಿಯೆಂದರೇ ಅರ್ಥವೇನು? ಅದನ್ನು ಆಚರಿಸುವುದು ಹೇಗೆ?

ಕಳಾವತಿ:—ಇದು ಬಹಳ ಗಹನವಾದ ವಿಷಯವು.

ಚಾರುಮತಿ:—ಈ ಗೂಢಾರ್ಥವನ್ನು ವಿವರಿಸಿ ಎಲ್ಲರಿಗೂ ತಿಳಿಯುವಂತೆ ಬೋಧಿಸತಕ್ಕವಳು ರಾಧೆಯೊಬ್ಬಳೇ ಹೊರತು ಈ ವಿಷಯವು ಮತ್ತಾರಿಗೂ ಸಾಧ್ಯವಲ್ಲವು.

ಗೋಪಿಯರೆಲ್ಲರೂ:—ರಾಧಾಮಣೀ! ಏಕಾಂತಭಕ್ತಿರಹಸ್ಯವನ್ನು ಸುಲಭವಾದ ರೀತಿಯಿಂದ ನಮ್ಮೆಲ್ಲರಿಗೂ ಬೋಧಿಸು. ನಾವೆಲ್ಲರೂ ಶ್ರದ್ಧೆಯಾಗಿ ಕೇಳುವೆವು.

ರಾಧೆ:—ಗೋಪಿಯರೆ! ನಿಮ್ಮ ನಿಮ್ಮ ಮನಸ್ಸಿನಲ್ಲಿ ಶ್ರೀಕೃಷ್ಣಪರಮಾತ್ಮನ ವಿಷಯವನ್ನು ಕುರಿತು ಯಾವ ವಿಧವಾದ ಅಭಿಪ್ರಾಯವಿರುವುದೋ ಅದನ್ನು ಒಬ್ಬೊಬ್ಬರಾಗಿ ಹೇಳುತ್ತ ಪ್ರಾರ್ಥಿಸಿರಿ. ತದನಂತರ ನನ್ನ ಮಾರ್ಗವನ್ನು ತಿಳಿಸುವೆನು. ದೇವಿಯ ಆಜ್ಞೆಯಂತೆ ಕುಂಜವನಕ್ಕೆ ಹೋಗುವ. ತೆರಳಿರಿ.

[ಗೋಪಿಯರೆಲ್ಲರೂ ಕುಂಜವನಕ್ಕೆ ತೆರಳುವರು.]

## ಪಂಚಮಾಂಕಂ—ಚತುರ್ಥರಂಗಂ.

[ಗೋಕುಲ ಬೃಂದಾವನದ ಕುಂಜವನದಲ್ಲಿ ಗೋಪಸ್ತ್ರೀಯರು ಶ್ರೀಕೃಷ್ಣಪರಮಾತ್ಮನನ್ನು ಗುಣರೂಪವಾಗಿ ಸ್ತೋತ್ರಮಾಡುವರು.]

**ಚಾರುಮತಿ:**—ಶ್ಲೋ ॥ ಜಯತಿತೇಽಧಿಕಂ ಜನ್ಮನಾವ್ರಜಃ ।
ಶ್ರಯತ ಇಂದಿರಾ ಶಶ್ವದತ್ರಹಿ ।
ದಯಿತದೃಶ್ಯತಾಂ ದಿಕ್ಷುತಾವಕಾಃ ।
ತ್ವಯಿಧೃತಾಸವಃ ತ್ವಾಂ ವಿಚಿನ್ವತೇ ॥

ಶ್ರೀಕೃಷ್ಣಾ ! ನೀನು ಇಲ್ಲಿ ಅವತರಿಸಿದುದರಿಂದ ಈ ನಮ್ಮ ಗೋಕುಲವು ಸರ್ವೋತ್ತಮವೆನಿಸಿತು. ಭಾಗ್ಯದೇವತೆಯಾದ ಲಕ್ಷ್ಮಿ ಯು ನಮ್ಮೀ ಗೋಕುಲದಲ್ಲಿ ನೆಲೆಗೊಳ್ಳುವಂತಾಯಿತು. ಪ್ರಾಣ ನಾಥಾ ! ನಿನ್ನನುಗ್ರಹದಿಂದ ಸಮಸ್ತ ಸೌಭಾಗ್ಯಗಳೂ ಸಿದ್ಧಿಸಿರುತ್ತವೆ. ಆದಾಗ್ಯೂ ನಿನ್ನಲ್ಲಿಯೇ ನಮ್ಮ ಪ್ರಾಣಗಳನ್ನಿಟ್ಟು ನಿನ್ನವರಾಗಿ ನಿನ್ನ ನ್ನು ನೋಡಲಪೇಕ್ಷಿಸುತ್ತಿರುವ ನಮಗೆ ನಿನ್ನ ಸಂದರ್ಶನವನ್ನು ಅನು ಗ್ರಹಿಸದೆ, ಹುಡುಕಿ ಹುಡುಕಿ ಹಂಬಲಿಸುವಂತೆ ನಮ್ಮನ್ನು ವ್ಯಥೆಗೆ ಗುರಿಮಾಡಿದೆಯಲ್ಲಾ ! ಕೃಷ್ಣಾ !! ನಮ್ಮನ್ನು ಕಟಾಕ್ಷಿಸಿ ನೋಡು !!!

**ನಂದಿನಿ:**—ಶ್ಲೋ ॥ ಶರದುದಾಶಯೇಽ ಸಾಧುಜಾತಸತ್ ।
ಸರಸಿಜೋದರ ಶ್ರೀ ಮುಷಾದೃಶಾ ॥
ಸುರತನಾಥತೇ ಶುಲ್ಕದಾಸಿಕಾಃ ।
ವರದನಿಘ್ನತೋ ನೇಹಕಿಂವಧಃ ॥

ಶ್ರೀಕೃಷ್ಣಾ ! ಆಹ್ಲಾದಕರವಾದ ಈ ಶರತ್ಕಾಲದ ಸಂಯೋಗ ದಿಂದ ಸೊಂಪಾಗಿ ಬೆಳೆದು ವಿರಾಜಿಸುತ್ತಿರುವ, ಕಮಲಪುಷ್ಪಗಳಿಗಿಂ ತಲೂ ಮನೋಹರವಾಗಿ ಕಂಗೊಳಿಸುತ್ತಿರುವ ನಿನ್ನ ಕಣ್ಣುಗಳ ಸೊಬಗಿನಿಂದಲೇ ನಮ್ಮನ್ನು ಹೀಗೆ ಕೊಲ್ಲುತ್ತಿರುವೆಯಲ್ಲಾ !

ಶ್ರೀಕೃಷ್ಣಾ ! ನಾವು ನಿನಗೆ ಅಮೂಲ್ಯವಾಗಿ ಲಭಿಸಿದ ದಾಸಿಯ ರಲ್ಲವೇ ! ನಾಥಾ ! ಎಷ್ಟೋ ಆಶೆಯಿಂದ ನಿನ್ನಲ್ಲಿಗೆ ಬಂದ ನಮ್ಮನ್ನು ಹೀಗೆ ನಿರಾಕರಿಸಬಹುದೆ ? ಆಯುಧವಿಲ್ಲದೆಯೇ ಕೊಲ್ಲುವುದೆಷ್ಟು ಹಿಂಸಾಕರವೋ ಅದರಂತೆಯೇ ಈ ನಿನ್ನ ಉಪೇಕ್ಷೆಯು ನಮ್ಮ ವಿಚಾ ರದಲ್ಲಿ ಅಶಸ್ತ್ರವಧೆಯುಲ್ಲವೆ ?

ನಳಿನಿ:—ಶ್ಲೋ॥ ವಿಷಜಲಾಶಯಾತ್ । ವ್ಯಾಳರಾಕ್ಷಸಾತ್ ।
ವರ್ಷಮಾರುತಾತ್ ವೈದ್ಯುತಾನಲಾತ್ ॥
ವೃಷಮಯಾತ್ಮಜಾತ್ ವಿಶ್ವತೋಽಭಯಾತ್ ।
ವೃಷಭತೇವಯಂ ರಕ್ಷಿತಾಮುಹುಃ ॥

ಶ್ರೀಕೃಷ್ಣಾ! ನಮ್ಮನ್ನು ವಿಷಜಲದಿಂದ ಬದುಕಿಸಿದ ಸ್ವಾಮಿಯು ನೀನಲ್ಲವೆ! ಮತ್ತು ಸರ್ಪಾಕಾರವನ್ನು ಧರಿಸಿದ ಅಘಾಸುರನಿಂದಲೂ, ಭಯಂಕರವಾದ ಮಳೆ ಗಾಳಿ ಸಿಡಿಲುಗಳಿಂದಲೂ, ಗೂಳಿಯ ರೂಪದಿಂದ ಬಂದ ಅರಿಷ್ಟಾಸುರನಿಂದಲೂ ವ್ಯೋಮಾಸುರನಿಂದಲೂ ಮತ್ತು ಅನೇಕವಾದ ಆಪತ್ತುಗಳಿಂದಲೂ, ನಮ್ಮನ್ನು ಪಾರುಮಾಡಿ ರಕ್ಷಿಸಿದ ಪ್ರಭುವು ನೀನೇ ಅಲ್ಲವೆ? ಇಂತಹ ಕರುಣಾಸಮುದ್ರನಾದ ನೀನು ಈಗಮಾತ್ರ ನಿರಾಕರಿಸುವುದೇಕೆ?

ಕಾಳಿಂದಿ:—ಶ್ಲೋ॥ ನಖಲುಗೋಪಿಕಾ, ನಂದನೋಭವಾ‌ನ್ ।
ಅಖಿಲದೇಹಿನಾಂ, ಅಂತರಾತ್ಮದೃಕ್ ।
ವಿಖನಸಾರ್ಥಿತೋ, ವಿಶ್ವಗುಪ್ತಯೇ ।
ಸಖಉದೇಯಿವಾ‌ನ್, ಸಾತ್ವತಾಂಕುಲೇ ॥

ಶ್ರೀಕೃಷ್ಣಾ! ನೀನು ನಿಜವಾಗಿಯೂ ಯಶೋದಾದೇವಿಯ ಮಗನಲ್ಲ! ಸಮಸ್ತ ಭೂತಗಳಿಗೂ ಅಂತರಾತ್ಮನೂ, ಅವರ ಸುಖದುಃಖಗಳಿಗೆ ಸಾಕ್ಷಿಯೂ, ಪರಮಾತ್ಮನೂ ಆದ ನೀನು ಲೋಕರಕ್ಷಣಾರ್ಥವಾಗಿ ಬ್ರಹ್ಮದೇವರ ಪ್ರಾರ್ಥನೆಯಂತೆ, ಅಪ್ರಾಕೃತ ದಿವ್ಯಶರೀರವನ್ನು ಪರಿಗ್ರಹಿಸಿ, ಈ ಯದುಕುಲದಲ್ಲಿ ಅವತರಿಸಿರುವ ನೀನು, ಆಶ್ರಿತರಾದ ನಮ್ಮನ್ನು ಮಾತ್ರ ವ್ಯಥೆಪಡಿಸಬಹುದೆ?

ಮಿತ್ರವಿಂದೆ:—ಶ್ಲೋ॥ ವಿರಚಿತಾಭಯಂ, ವೃಷ್ಣಿಧುರ್ಯತೇ ।
ಶರಣಮೀಯುಷಾಂ, ಸಂಸೃತೇರ್ಭಯಾತ್ ।
ಕರಸರೋರುಹಂ, ಕಾಂತಕಾಮದಂ ॥
ಶಿರಸಿದೇಹಿನಃ, ಶ್ರೀಕರಗ್ರಹಮ್ ॥

ಶ್ರೀಕೃಷ್ಣಾ! ಶರಣಾಗತ ಧರ್ಮದಿಂದ ನಿನ್ನನ್ನೇ ಆಶ್ರಯಿಸಿ ಬಂದ ನಮ್ಮಲ್ಲಿ ಕರುಣವಿಟ್ಟು, ನಮ್ಮ ಕೋರಿಕೆಯನ್ನು ಸಫಲಗೊಳಿಸು! ಪ್ರಭುವಾದ ನಿನ್ನಲ್ಲಿ ನಾವು ಮತ್ತಾವುದನ್ನೂ ಆಶಿಸುವುದಿಲ್ಲ. ನಮ್ಮ

ಅಭೀಷ್ಟವೆಲ್ಲವೂ ನಿನ್ನ ದಿವ್ಯ ಮಂಗಳ ಶರೀರಸ್ಪರ್ಶವೊಂದೇ. ಆದು ದರಿಂದ ಸಂಸಾರವೆಂಬ ಕಾಂತಾರದಲ್ಲಿ ಸಿಲುಕಿ ಕಂಗೆಟ್ಟವರಿಗೆ ಅಭಯ ಪ್ರದಾನವಾಗಿಯೂ, ಆಶ್ರಿತರಿಗೆ ವರಪ್ರದಾನವಾಗಿಯೂ, ಜಗನ್ಮಾತೆ ಯಾದ ಶ್ರೀದೇವಿಯ ಹಸ್ತಸಂಬಂಧವುಳ್ಳದಾಗಿಯೂ ಇರುವ ನಿನ್ನ ದಿವ್ಯ ಹಸ್ತವನ್ನು ನಮ್ಮ ಮಸ್ತಕಗಳಮೇಲೆ ಅಲಂಕರಿಸು!

**ಕಳಾವತಿ:**—ಶ್ಲೋ॥ ವ್ರಜಜನಾರ್ತಿಹರ್, ವೀರಯೋಷಿತಾಂ।
ನಿಜಜನಸ್ಮಯ, ಧ್ವಂಸನಸ್ಮಿತ।
ಭಜಸಖೇಭವತ್ ಕಿಂಕರೀಸ್ಮನೋ।
ಜಲರುಹಾನನಂ, ಚಾರುದರ್ಶಯ॥

ಶ್ರೀಕೃಷ್ಣಾ! ವೀರಶಿರೋಮಣೀ! ನೀನು ಗೋಕುಲವಾಸಿಗಳ ದುಃಖವನ್ನು ಪರಿಹರಿಸತಕ್ಕವನಲ್ಲವೆ? ಹಾಗಿರುವಲ್ಲಿ ನಮ್ಮನ್ನು ಮಾತ್ರ ನಿರಾಕರಿಸುವುದಕ್ಕೇನು ಕಾರಣ? ನಿನ್ನ ಕಿರುನಗೆಯು ಮಾತ್ರದಿಂದಲೇ ನಮ್ಮಂತಹ ಕಾಂತೆಯರ ಹೆಮ್ಮೆಯು ಪರಿಹಾರವಾಗುತ್ತದೆ. ಆ ನಿನ್ನ ಕಿರುನಗೆಗೆ ಮರುಳಾಗಿ ನಾವೆಲ್ಲರೂ ನಿನಗೆ ದಾಸಿಯರಾಗಿರುವೆವು. ನಿನ್ನ ಮುಖಕಮಲವನ್ನು ನಮ್ಮ ಆಶೆ ತೀರುವಂತೆ ಒಂದುಸಾರಿ ತೋರ ಬಾರದೆ?

**ಇಂದುಲೇಖೆ:**—ಶ್ಲೋ॥ ಪ್ರಣತದೇಹಿನಾಂ, ಪಾಪಕರ್ಶನಂ।
ತೃಣಚರಾನುಗಂ, ಶ್ರೀನಿಕೇತನಂ।
ಫಣಿಫಣಾರ್ಪಿತಂ, ತೇಪದಾಂಬುಜಂ।
ಕೃಣುಕುಚೇಷುನಃ, ಕೃಂಧಿಹೃಚ್ಛಯಂ॥

ಶ್ರೀಕೃಷ್ಣಾ! ನಂಬಿದವರ ಪಾಪವನ್ನು ಪರಿಹರಿಸತಕ್ಕದಾಗಿ ಯೂ ಗೋಕುಲದ ಹಸುಗಳ ಮಂದೆಯನ್ನು ಹಿಂಬಾಲಿಸತಕ್ಕ ದಾಗಿಯೂ, ಸಂತತ ಸೌಭಾಗ್ಯ ಲಕ್ಷ್ಮಿಗೆ ಆಶ್ರಯವಾಗಿಯೂ, ಮದಾಂಧನಾದ ಕಾಳೀಯನ ಹೆಡೆಯನ್ನು ಮೆಟ್ಟಿದುದಾಗಿಯೂ, ಇರು ವ ನಿನ್ನ ಚರಣಕಮಲಗಂಳಿದ ನಮ್ಮ ವಕ್ಷೋಜಗಳನ್ನಲಂಕರಿಸಿ, ನಮ್ಮ ಸಂತಾಪವನ್ನು ಪರಿಹರಿಸು!

**ವಸಂತಮಾಲತಿ:**—ಶ್ಲೋ॥ ಮಧುರಯಾಗಿರಾ, ವಲ್ಗುವಾಕ್ಯಯಾ।
ಬುಧಮನೋಜ್ಞಯಾ ಪುಷ್ಕರೇಕ್ಷಣ!

ವಿಧಿಕರೀರಿಮಾ, ವೀರಮುಹ್ಯತೀಃ ॥
ಅಧರಸೀಧುನಾ ಪಾಯಯಸ್ವನಃ ॥

ಶ್ರೀಕೃಷ್ಣಾ ! ಕಮಲಪತ್ರೇಕ್ಷಣಾ ! ಜ್ಞಾನಿಗಳ ಮನಸ್ಸನ್ನು ರಂಜಿಸತಕ್ಕುದಾಗಿಯೂ, ಮನೋಹರವಾದ ವಚನ ರಚನೆಯುಳ್ಳುದಾಗಿಯೂ ಕರ್ಣಾನಂದಕರವಾಗಿಯೂ ಇರುವ ನಿನ್ನ ಮುದ್ದು ಮಾತುಗಳಿಗೆ ನಾವೆಲ್ಲರೂ ಸಮ್ಮೋಹಗೊಂಡಿರುವೆವು. ನಾವು ಅನನ್ಯಭಾವಿಗಳಾದ ನಿನ್ನ ದಾಸಿಯರು. ನಿನ್ನ ಅಧರಾಮೃತಪಾನನ್ನನುಗ್ರಹಿಸಿ ನಮ್ಮನ್ನು ಬದುಕಿಸು !

ಭಾನುಮತಿ:—ಶ್ಲೋ॥ ತವಕಥಾಮೃತಂ ತಪ್ತಜೀವನಂ ।
ಕವಿಭಿರೀಡಿತಂ । ಕಲ್ಮಷಾಪಹಂ ।
ಶ್ರವಣಮಂಗಳಂ, ಶ್ರೀಮದಾತತಂ ।
ಭುವಿಗೃಣಂತಿಯೇ ಭೂರಿದಾಜನಾಃ ॥

ಶ್ರೀಕೃಷ್ಣಾ ! ತಾಪತ್ರಯದಿಂದ ಕಂಗೆಟ್ಟವರಿಗೆ ನಿನ್ನ ಕಥಾಮೃತವು ಜೀವನದಾಯಕವಾಗಿರುವುದು. ಬ್ರಹ್ಮಾದಿ ದೇವತೆಗಳಿಗೂ ಆದರಣೀಯವಾದುದು. ಸಕಲ ಕಲ್ಮಷಗಳನ್ನೂ ಪರಿಹರಿಸತಕ್ಕದು. ಶಾಂತ ಸಂತೋಷಾದಿ ಸದ್ಗುಣಗಳನ್ನುಂಟುಮಾಡತಕ್ಕುದು. ಇಂತು ಸ್ವರ್ಗಲೋಕದಲ್ಲಿ ವಿಖ್ಯಾತವಾದ ಅಮೃತಕ್ಕಿಂತಲೂ ಶ್ರೇಷ್ಠವಾದ ನಿನ್ನ ಕಥಾಮೃತವನ್ನು ಯಾರು ಸೇವಿಸುವರೋ ಅಂಥವರು ಜನ್ಮಾಂತರದಲ್ಲಿ ಅನೇಕ ದಾನಧರ್ಮಾದಿ ಸತ್ಕಾರ್ಯಗಳನ್ನು ಮಾಡಿದ ಪುಣ್ಯಾತ್ಮರಾಗಬೇಕು. ಅಂತಹ ಪೂರ್ವಪುಣ್ಯದಿಂದಲ್ಲದೆ ನಿನ್ನ ಕಥಾಮೃತಪಾನವೆಂಬ ಮಹಾ ಭಾಗ್ಯವು ಸಾಮಾನ್ಯವಾಗಿ ಲಭಿಸತಕ್ಕುದಲ್ಲ !

ಲೀಲಾವತಿ:—ಶ್ಲೋ॥ ಪ್ರಹಸಿತಂಪ್ರಿಯ, ಪ್ರೇಮವೀಕ್ಷಿತಂ ।
ವಿಹರಣಂಚತೇ, ಧ್ಯಾನಮಂಗಳಂ ।
ರಹಸಿಸಂವಿದೋ, ಯಾಹೃದಿಸ್ಪೃಶಃ ।
ಕುಹಕನೋಮನಃ, ಕ್ಷೋಭಯಂತಿಹಿ ॥

ಶ್ರೀಕೃಷ್ಣಾ ! ನಿನ್ನ ಕಥಾಶ್ರವಣದಿಂದಲಾದರೂ ತೃಪ್ತರಾಗಿರೋಣವೆಂದರೆ, ಅದೂ ನಮಗೆ ಸಾಧ್ಯವಲ್ಲ. ಏಕೆಂದರೆ ಜಗನ್ಮೋಹನಾ

ಕರವಾದ ನಿನ್ನ ಮುಗುಳ್ನಗೆ, ಪ್ರೇಮಪೂರಿತವಾದ ನಿನ್ನನೋಟಗಳು, ನೆನೆದ ಮಾತ್ರಕ್ಕೆ ಪರಮಾನಂದವನ್ನುಂಟುಮಾಡುವ ನಿನ್ನ ಲೀಲೆಗಳು, ಮನಮೋಹನಕರವಾದ ನಿನ್ನ ಏಕಾಂತ ವಿಲಾಸಗಳು, ಮುಂತಾದ ಇವೆಲ್ಲವೂ ನಮ್ಮ ಮನಸ್ಸನ್ನು ಕಲಕಿಸಿರುವುದರಿಂದ ನಿನ್ನ ಕಥಾಶ್ರವಣ ಮಾತ್ರದಿಂದಲೇ ತೃಪ್ತರಾಗಿರುವುದು ಸಾಧ್ಯವಲ್ಲದ ವಿಷಯವು!

ಕಾಂಚನಮಾಲೆ:—ಶ್ಲೋ ॥ ಚಲಸಿಯದ್ವ್ರಜಾತ್, ಚಾರಯನ್ಪಶೂ ।
ನಳಿನಸುಂದರಂ, ನಾಥತೇಪದಂ ।
ಶಿಲತೃಣಾಂಕುರೈಃ, ಸೀದತೀತಿನಃ ।
ಕಲಿಲತಾಂಮನಃ, ಕಾಂತಗಚ್ಛತಿ ॥

ಶ್ರೀಕೃಷ್ಣಾ! ಪ್ರಾಣಕಾಂತಾ! ನೀನು ಗೋವುಗಳನ್ನು ಮೇಯಿಸುವುದಕ್ಕಾಗಿ ಗೋಕುಲದಿಂದ ಕಾಡಿಗೆ ಹೋದಾಗ ಕಾಡಿನಲ್ಲಿರುವ ಹುಲ್ಲು ಕಡ್ಡಿಗಳು ಕಾಲಿಗೆ ಚುಚ್ಚುವುದರಿಂದ ನಿನ್ನ ಕಾಲುಗಳೆಷ್ಟು ನೋಯುವುವೋಯೆಂದು ನಾವು ವ್ಯಥೆಪಡಲಿಲ್ಲವೇ? ಅದನ್ನೆಲ್ಲಾ ನೀನರಿಯೆಯಾ? ಇಂತು ನಿನ್ನಲ್ಲಿ ಅಸಮಾನವಾದ ಪ್ರೇಮವನ್ನಿಟ್ಟು ಕ್ಷಣಕ್ಷಣಕ್ಕೂ ಮರುಗುತ್ತಿರುವ ನಮ್ಮನ್ನು ವಂಚಿಸಿ ನೀನು ಈತೆರನಾಗಿ ನಮ್ಮ ಕಣ್ಣಿಗೆ ಕಾಣದೆ ಹೋಗಬಹುದೆ?

ಮಂಜುವಾಣಿ:—ಶ್ಲೋ ॥ ದಿನಪರಿಕ್ಷಯೇ, ನೀಲಕುಂತಲೈಃ ।
ವನರುಹಾನನಂ, ಬಿಭ್ರದಾವೃತಂ ।
ವನರಜಸ್ವಲಂ, ದರ್ಶಯನ್ಮುಹುಃ ।
ಮನಸಿನಸ್ಸ್ಮರಂ, ವೀರಯಚ್ಛತಿ ॥

ಶ್ರೀಕೃಷ್ಣಾ! ಗೋಧೂಳಿ ಸಮಯವಾದ ಸಂಧ್ಯಾಕಾಲದಲ್ಲಿ ನೀನು ಗೋವುಗಳನ್ನಟ್ಟಿಕೊಂಡು, ಕಾಡಿನಿಂದ ಹಿಂದಿರುಗಿ ಮನೆಗೆ ಬರುವಾಗ, ಭ್ರಮರಗಳನ್ನು ಧಿಕ್ಕರಿಸತಕ್ಕ ನಿನ್ನ ಮುಂಗುರುಳುಗಳು ಗಾಳಿಯಿಂದ ಚೆದರಿಸಲ್ಪಟ್ಟು ಆಡುತ್ತಿರಲು, ಗೋವುಗಳ ಮುಂದೆಯಲ್ಲಿ ಹುಟ್ಟಿದ ಧೂಳಿಯಿಂದ ಆವೃತವಾದ ನಿನ್ನ ಮುಖಾರವಿಂದವು ನಮ್ಮ ಮನಸ್ಸಿಗೆ ನಿತಾಂತವಾದ ಆನಂದವನ್ನು ಬೀರುತ್ತಿದ್ದಿತು. ಇಂತು ನಿನ್ನ ಮುಖಸಂದರ್ಶನದಿಂದ ನಮ್ಮ ಮನಸ್ಸುಗಳನ್ನಾಕರ್ಷಿಸಿದ ಜಗದೇಕ

ಸುಂದರನಾದ ನೀನು, ಈ ಸಮಯದಲ್ಲಿ ಮಾತ್ರ ನಮ್ಮನ್ನು ಕೈಬಿಟ್ಟು ಹೋಗಬಹುದೇ ?

**ಲಕ್ಷಣೆ:**—ಶ್ಲೋ॥ ಪ್ರಣತಕಾಮದಂ, ಪದ್ಮಜಾರ್ಚಿತಂ ।
ಧರಣಿಮಂಡನಂ, ಧ್ಯೇಯಮಾಪದಿ ।
ಚರಣಪಂಕಜಂ, ಶಂತಮಂಚತೇ ।
ರಮಣನಸ್ತನೇ, ಷ್ವರ್ಪಯಾಧಿಹನ್ ॥

ಶ್ರೀಕೃಷ್ಣಾ! ಶರಣಾಗತಭಾವದಿಂದ ನಿನ್ನ ಮರೆಹೊಕ್ಕವರ ಇಷ್ಟಾರ್ಥಗಳನ್ನು ಅನುಗ್ರಹಿಸತಕ್ಕುದಾಗಿಯೂ, ಬ್ರಹ್ಮಾದಿಗಳಿಗೂ ಪೂಜ್ಯವಾಗಿಯೂ, ಭೂಮಿಗೆ ಅಲಂಕಾರಪ್ರಾಯವಾಗಿಯೂ, ಸಂಕಟ ಸಮಯದಲ್ಲಿ ಧ್ಯಾನಿಸಲ್ಪಡತಕ್ಕುದಾಗಿಯೂ, ಸಂತತ ಸುಖಪ್ರದವಾಗಿಯೂ ಇರುವ ನಿನ್ನ ಪಾದಪದ್ಮಂಗಳನ್ನು ನಮ್ಮ ವಕ್ಷೋಜಗಳಿಗೆ ಅಲಂಕರಿಸಿ ನಮ್ಮ ಹೃದಯಗಳನ್ನು ವೇದಿಸುತ್ತಿರುವ ಸಂತಾಪವನ್ನು ಪರಿಹರಿಸು !

**ವನಲತೆ:**—ಶ್ಲೋ॥ ಸುರತವರ್ಧನಂ, ಶೋಕನಾಶನಂ ।
ಸ್ವರಿತವೇಣುನಾ, ಸುಷ್ಠುಚುಂಭಿತಂ ।
ಇತರರಾಗವಿ, ಸ್ಮಾರಣಂನೃಣಾಂ ।
ವಿತರವೀರನಃ, ತೇಽಧರಾಮೃತಂ ॥

ಶ್ರೀಕೃಷ್ಣಾ ! ವೀರವಿಕ್ರಮಾ ! ಲೋಕಾಭಿರಾಮವಾದ ಸಾರ್ವಭೌಮತ್ವಾದಿ ಪದವಿಗಳಲ್ಲಿ ಮನುಷ್ಯರಿಗಿರತಕ್ಕ ಆಶೆಯನ್ನು ಪರಿಹರಿಸತಕ್ಕುದಾಗಿಯೂ, ಪ್ರೇಮಪಾಶಕ್ಕೆ ಸಿಲುಕಿದವರಾದ ನಮ್ಮಂತಹ ಸ್ತ್ರೀಯರ ಕಾಮಪಾಶಗಳನ್ನು ಪೂರ್ತಿಗೊಳಿಸತಕ್ಕುದಾಗಿಯೂ, ನಂಬಿದವರ ದುಃಖಗಳನ್ನು ಪರಿಹರಿಸತಕ್ಕುದಾಗಿಯೂ, ಮೃದುಮಧುರ ಸ್ವರವುಳ್ಳ ಮುರಳಿಯನ್ನು ಬಾರಿಬಾರಿಗೂ ಚುಂಬಿಸತಕ್ಕುದಾಗಿಯೂ ಇರುವ ನಿನ್ನ ಅಧರಾಮೃತವನ್ನು ನಮಗೆ ಪ್ರಸಾದಿಸಬಾರದೆ ?

**ರೂಪಮಂಜರಿ:**—ಶ್ಲೋ॥ ಅಟತಿಯದ್ಭವಾನ್, ಅಹ್ನಿಕಾನನಂ ।
ತ್ರುಟಿಯುಗಾಯತೇ, ತ್ವಾಮಪಶ್ಯತಾಂ ।

ಕುಟಿಲಕುಂತಲಂ, ಶ್ರೀಮುಖಂಚತೇ ।
ಜಡಉದೀಕ್ಷತಾಂ, ಪಕ್ಷ್ಮಕೃದೃಶಾಂ ॥

ಶ್ರೀಕೃಷ್ಣಾ! ನೀನು ಗೋವುಗಳನ್ನಟ್ಟಿಕೊಂಡು ಕಾಡಿಗೆ ಹೋದಾಗ, ನಿನ್ನ ಅಗಲಿಕೆಯನ್ನು ಸಹಿಸಲಾರದ ನಮಗೆ, ನಿನ್ನನ್ನು ಪುನಃ ನೋಡುವತನಕ ಒಂದೊಂದು ತ್ರುಟಿಕಾಲವೂ ಒಂದೊಂದು ಯುಗವಾಗಿ ತೋರುತ್ತದೆ. ಸಂಧ್ಯಾಕಾಲದಲ್ಲಿ ನೀನು ಮನೆಗೆ ಬಂದ ವೇಳೆ ಮುಂಗುರುಳುಗಳಿಂದ ಶೋಭಿತವಾದ ನಿನ್ನ ಮುದ್ದುಮುಖ ವನ್ನು ನೋಡುತ್ತಲೇ ಪರಮಾನಂದವುಂಟಾಗುತ್ತದೆ. ಈ ತೆರನಾಗ ಸಂತೋಷದಲ್ಲಿ ಮಗ್ನರಾಗಿರತಕ್ಕವರು, ರೆಪ್ಪೆಹಾಕುವಷ್ಟು ಕಾಲವಾ ದರೂ ನಿನ್ನನ್ನು ನೋಡದೇ ಇರಲಾರರು. ಆದುದರಿಂದ ಅಂಥವರು, ತಮಗೆ ಅನಿಮಿಷತ್ವವನ್ನು (ಎವೆಯಿಡದಿರುವುದನ್ನು) ಕೊಡದೆ ಹೋದು ದಕ್ಕಾಗಿ ಬ್ರಹ್ಮನನ್ನು ಜಡನೆಂದು ಭಾವಿಸುವರು!

ಪುಷ್ಪವೇಣೀ:—ಶ್ಲೋ॥ ಪತಿಸುತಾನ್ವಯ, ಭ್ರಾತೃಬಾಂಧವಾ ।
ಅತಿವಿಲಂಘ್ಯತೇ ನ್ತ್ಯಚ್ಯುತಾಗತಾಃ ।
ಗತಿವಿದಸ್ತವೋ ದ್ಗೀತಮೋಹಿತಾಃ ।
ಕಿತವಯೋಷಿತಃ, ಕಸ್ತ್ಯಜೇನ್ನಿಶಿ ॥

ಶ್ರೀಕೃಷ್ಣಾ! ಅಚ್ಯುತಾ! ನಿನ್ನ ಅಪ್ರಾಕೃತ ದಿವ್ಯಮಂಗಳ ಸ್ವರೂಪವನ್ನು ಸಂದರ್ಶಿಸಿ, ತವೀಯ ಸೌಂದರ್ಯ ರಸವನ್ನು ಅನುಭವಿಸ ಬೇಕೆಂಬ ಕುತೂಹಲದಿಂದ ನಮ್ಮ ಪತಿಗಳನ್ನೂ, ಪುತ್ರರನ್ನೂ, ನೆಂಟ ರನ್ನೂ, ಒಡಹುಟ್ಟಿದವರನ್ನೂ ಕೂಡಾ ಉಲ್ಲಂಘಿಸಿ, ನಿನ್ನ ಮುರಳೀ ಗಾನದಿಂದ ಮೋಹಿತರಾಗಿ ಬಂದಿರುವೆವು. ನೀನಿರುವ ಈ ದಾರಿ ಯನ್ನು ಬಹು ಪ್ರಯತ್ನ ಮಾಡಿ ಕಂಡು ಹಿಡಿದೆವು. ಇಂತಹ ಈ ರಾತ್ರಿ ಕಾಲದಲ್ಲಿ ನಿನ್ನನ್ನು ಒಲಿದು ಬಂದ ಕಾಮಿನಿಯರನ್ನು ಹೀಗೆ ನಿರಾ ಕರಿಸಬಹುದೆ? ಇಂತಹ ಕಾರ್ಯವನ್ನು ನೀನೊಬ್ಬನಲ್ಲದೆ ಮತ್ತೆ ಯಾ ರಾದರೂ ಮಾಡುವರೆ?

ಭದ್ರೆ:—ಶ್ಲೋ॥ ರಹಸಿಸಂವಿದಂ, ಹೃಚ್ಛಯೋದಯಂ ।
ಪ್ರಹಸಿತಾನನಂ, ಪ್ರೇಮವೀಕ್ಷಣಂ ।

ಬೃಹದುರಶ್ಶ್ರಿಯೋ, ಧಾಮವೀಕ್ಷ್ಯತೇ ।
ಮುಹುರತಿಸ್ಪೃಹಾ, ಮುಹ್ಯತೇಮನಃ ॥

ಶ್ರೀಕೃಷ್ಣಾ ! ಶ್ರೀಕಾಂತನಾದ ನೀನು ಏಕಾಂತದಲ್ಲಿ ನಮ್ಮನ್ನು ಸಂತೋಷಗೊಳಿಸಿದ ಲೀಲೆಗಳೂ, ಮುಗುಳುನಗೆಯಿಂದೊಡಗೂಡಿದ ನಿನ್ನ ಮುಖವೂ, ಪ್ರೇಮಪೂರ್ವಕವಾದ ನಿನ್ನ ನೋಟವೂ, ಲಕ್ಷ್ಮಿಗೆ ನಿವಾಸಸ್ಥಾನವಾದ ನಿನ್ನ ವಕ್ಷಸ್ಥಲದ ಸೊಬಗೂ, ನಮ್ಮ ಮನಸ್ಸುಗಳನ್ನು ಆಕರ್ಷಿಸಿರುವುದಲ್ಲಾ !

ಲಲಿತೆ:—ಶ್ಲೋ ॥ ವ್ರಜವನೌಕಸಾಂ ವ್ಯಕ್ತಿರಂಗತೇ ।
ವೃಜಿನಹಂತ್ರ್ಯಲಂ ವಿಶ್ವಮಂಗಳಮ್ ।
ತ್ಯಜಮನಾಕ್ಚನಃ ತತ್ಸ್ಪೃಹಾತ್ಮನಾಂ ।
ಸ್ವಜನಹೃದ್ರುಜಾಂ ಯನ್ನಿಷೂದನಂ ॥

ಶ್ರೀಕೃಷ್ಣಾ ! ನಿನ್ನ ಅವತಾರವು ಗೋಕುಲವಾಸಿಗಳಾದ ಗೋಪಾಲಕರಿಗೂ, ಅರಣ್ಯವಾಸಿಗಳಾದ ಋಷಿಮುನಿಗಳಿಗೂ, ದುಃಖಪರಿಹಾರಕವಾದುದು. ಮತ್ತು ಜಗನ್ಮಂಗಳಕರವಾದುದು. ಇಂತು ನಿನ್ನ ಅವತಾರವು ಸರ್ವಲೋಕಶುಭಾವಹವಾಗಿರುವಲ್ಲಿ, ನಿನ್ನಲ್ಲಿಯೇ ಮನಸ್ಸುಗಳನ್ನು ನೆಲೆಗೊಳಿಸಿ, ನಿನ್ನನ್ನೇ ನಂಬಿರುವ ನಮಗೆ ಮಾತ್ರ, ಕೇವಲ ಸಂತಾಪಕರವಾಗಬಹುದೆ ? ನಮ್ಮ ಸಂತಾಪವನ್ನು ಪರಿಹರಿಸಬಾರದೆ?

ಪದ್ಮಾವತಿ:—ಶ್ಲೋ ॥ ಯತ್ತೇಸುಜಾತ ಚರಣಾಂಬುರುಹಂಸ್ತನೇಷು ।
ಭೀತಾಶ್ಶನೈಃ ಪ್ರಿಯದಧೀಮಹಿಕರ್ಕಶೇಷು ।
ತೇನಾಟವೀಮಟಸಿ ತದ್ವ್ಯಥತೇನಕಿಂಸ್ವಿತ್ ।
ಕೂರ್ಪಾದಿಭಿರ್ಭ್ರಮತಿಧೀರ್ಭವ ದಾಯುಷಾಂನಃ ॥

ಶ್ರೀಕೃಷ್ಣಾ ! ಪ್ರಾಣಪ್ರಿಯಾ ! ನಮ್ಮನ್ನು ಕುರಿತು ಅಷ್ಟಾಗಿ ದುಃಖಿಸುವುದಿಲ್ಲ. ಕುಸುಮಕೋಮಲವಾದ ನಿನ್ನ ಚರಣಯುಗಳದಿಂದ ನಮ್ಮ ವಕ್ಷೋಜಗಳನ್ನು ಅಲಂಕರಿಸಿದಾಗ, ಅಷ್ಟು ಮಾತ್ರಕ್ಕೇ ಬಹಳವಾಗಿ ನೋಯುವುವೋ ಎಂಬ ಭೀತಿಯಿಂದ ನಾವು ನಿನ್ನ ಪಾದಗಳನ್ನು ಒತ್ತುತ್ತಿರಲಿಲ್ಲವೆ ? ಮೃದುವಾದ ಅಂತಹ ನಿನ್ನ ಸುಕುಮಾರ ಪಾದಗಳನ್ನು ಅರಣ್ಯಸಂಚಾರದಿಂದ ಕಲ್ಲುಮುಳ್ಳುಗಳಿಗೆ ಗುರಿಮಾಡಿ

ನೋಯಿಸುತ್ತಿರುವೆಯಲ್ಲಾ! ಇದು ನಮಗೆ ಎಷ್ಟೊಂದು ಸಂಕಟವನ್ನುಂಟುಮಾಡುವುದೋ ನೀನೇ ಯೋಚಿಸಿ ನೋಡು! ಕೃಷ್ಣಾ! ನಮ್ಮ ಆತ್ಮಸರ್ವಸ್ವವನ್ನೂ ನಿನಗೊಪ್ಪಿಸಿರುವೆವು! ನಿನ್ನ ಆಧೀನರಾಗಿರುವೆವು!! ಆಶ್ರಿತರಾದ ನಮಗೆ ನಿನ್ನ ಸಂದರ್ಶನವನ್ನು ಕೊಟ್ಟು ರಕ್ಷಿಸು!!!

ರಾಧೆ:—ಲತಾಂಗಿಯರೆ! ಈಗ ನೀವೆಲ್ಲರೂ ನಿಮ್ಮ ಮಾನಸ ಕಮಲಾಸನದಲ್ಲಿ ಶ್ರೀಕೃಷ್ಣ ಪರಮಾತ್ಮನ ಪಾದಪದ್ಮಗಳನ್ನು ನಿಷ್ಕಳಂಕ ಪ್ರೇಮಭಾವದಿಂದ ನೆಲೆಗೊಳಿಸಿರಿ. ಏಕಚಿತ್ತಮನೋಭಾವದಿಂದ ನಾನು ಹೇಳುವ ಈ ಸ್ತೋತ್ರವನ್ನು ಎಲ್ಲರೂ ಹೇಳಿರಿ. ಆಗ ಭಗವಂತನು ನಮಗೆ ಪ್ರತ್ಯಕ್ಷವಾಗುವನು.

[ಗೋಪಿಯರೆಲ್ಲರೂ ಭಕ್ತಿಭಾವದಿಂದ ಕೈಮುಗಿದು ನಿಲ್ಲುವರು.]

ರಾಧೆ:—(ತಾನೂ ಕೈಮುಗಿದು ನಿಂತು ಪ್ರಾರ್ಥಿಸುವಳು.)

ಶ್ಲೋ॥ ನಾನ್ಯಂವದಾಮಿನಶೃಣೋಮಿನಚಿಂತಯಾಮಿ। ನಾನ್ಯಂಸ್ಮರಾಮಿನಭಜಾಮಿನಚಾಶ್ರಯಾಮಿ । ಭಕ್ತ್ಯಾತ್ವದೀಯಚರಣಾಂಬುಜದಾಸ್ಯಮೇವ।
ಹೇಪ್ರಾಣನಾಥಕರುಣಾಕರದೇಹಿನಿತ್ಯಂ ॥

ಜಗನ್ನಾಥಾ! ಪ್ರಾಣನಾಥಾ! ಶ್ರೀಕೃಷ್ಣಾ! ಅಚಂಚಲವಾದ ಭಕ್ತಿಯಿಂದ ನಿನ್ನ ಪಾದಾರವಿಂದಗಳನ್ನು ಧ್ಯಾನಿಸುವ ಭಾಗ್ಯವನ್ನನುಗ್ರಹಿಸು! ನಿನ್ನ ಹೊರತು ಅನ್ಯರನ್ನು ಆಶ್ರಯಿಸುವುದಿಲ್ಲ. ನುಡಿಯುವುದಿಲ್ಲ. ಭಜಿಸುವುದಿಲ್ಲ. ಕೇಳುವುದಿಲ್ಲ. ಏಕಾಂತಭಕ್ತಿಪ್ರಿಯಾ! ಶ್ರೀಕಾಂತಾ! ಬೇಗನೆ ಪ್ರತ್ಯಕ್ಷನಾಗಿ ರಕ್ಷಿಸು!

[ಎಲ್ಲರೂ ಒಂದೇ ವಿಧವಾದ ಭಕ್ತಿಯಿಂದ ಪ್ರಾರ್ಥಿಸುವರು.]

---

## ಪಂಚಮಾಂಕಂ—ಪಂಚಮರಂಗಂ.

ಪ್ರದೇಶ:—ಕುಂಜವನ.

ಶ್ರೀಕೃಷ್ಣಪರಮಾತ್ಮನು ಗೋಪಿಯರ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷವಾಗುವನು.

ಶ್ರೀಕೃಷ್ಣ:—ಶೃಂಗಾರವತಿಯರೇ! ಈ ರಾತ್ರಿ ಕಾಲದಲ್ಲಿ ನೀವೆಲ್ಲರೂ ಹೀಗೆ ಗುಂಪುಕೂಡಿ ಬರಬಹುದೆ? ನಿಮ್ಮ ಪತಿಗಳನ್ನು ಸೇವಿಸುತ, ಸುತರನ್ನು ಲಾಲಿಸುತ, ಹಿತಬಂಧುಗಳನ್ನು ಆದರಿಸುತ, ಹಿರಿಯರನ್ನು ಸೇವಿಸುತ, ಸಂಸಾರಕಾರ್ಯಗಳಲ್ಲಿ ನಿರತರಾಗಿರಬೇಕಾದುದು ಲೋಕರೂಢಿಯಾಗಿರುವಲ್ಲಿ, ಅದನ್ನು ನಿರಾಕರಿಸಿ ಇಲ್ಲಿಗೇಕೆ ಬಂದಿರಿ?



ಗೋಪಿಯರು:—ಕೃಷ್ಣಾ! ನಿನ್ನ ಸಂದರ್ಶನಕ್ಕಾಗಿ ಬಂದೆವು.

ಶ್ರೀಕೃಷ್ಣ:—ಹಾಗೂ ಆಗಲಿ. ನನ್ನಿಂದ ನೀವು ಪಡೆಯಬೇಕಾದ ಇಷ್ಟಾರ್ಥವೇನು?

ಗೋಪಿಯರು:—ಪರಮಪಟೋವಿಲಾಸಮೂರ್ತಿಯಾದ ನಿನ್ನೊಂದಿಗೆ ಸಂಭಾಷಣಾಲಿಂಗನಾನಂದವನ್ನು ಪಡೆಯಬೇಕೆಂಬುದೇ ನಮ್ಮ ಇಷ್ಟಾರ್ಥವು.

ಶ್ರೀಕೃಷ್ಣ:—

ಶ್ಲೋ ॥ ನಮಯ್ಯಾವೇಶಿತಧಿಯಾಂಕಾಮಃಕಾಮಾಯಕಲ್ಪತೇ।
ಭರ್ಜಿತಾಃಕ್ವಥಿತಾಧಾನ್ಯಾಪ್ರಾಯೋಬೀಜಾಯನೇಷ್ಯತೇ ॥

ಲತಾಂಗಿಯರೇ! ನನ್ನಲ್ಲಿ ಮನಸ್ಸಿಟ್ಟವರಿಗೆ ತುಚ್ಛವಾದ ಕಾಮಾಪೇಕ್ಷೆಯಿರುವುದಿಲ್ಲವು. ಕುಟ್ಟಿ, ಬೇಯಿಸಿ ಪಕ್ವಮಾಡಲ್ಪಟ್ಟ ಧಾನ್ಯವು ಹೇಗೆ ಪುನಃ ಮೊಳೆಯುವುದಿಲ್ಲವೋ, ಅದರಂತೆ ಯಾರ ಮನಸ್ಸು ನನ್ನಲ್ಲಿ ನೆಲೆಗೊಳ್ಳುವುದೋ ಅಂಥವರಿಗೆ ಕಾಮಕ್ರೋಧಾದಿ ನೀಚ ಭಾವಗಳಿರುವುದಿಲ್ಲವು. ಈ ಅಭಿಪ್ರಾಯವನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಳ್ಳಿರಿ!

ರಾಧೆ:—ಪರಮಾತ್ಮನೇ! ಈಗ ನೀನು ಯಾವ ಪರಮಾರ್ಥವನ್ನು ಸೂಚಿಸಿದೆಯೋ, ನಮ್ಮ ಇಷ್ಟಾರ್ಥವೂ ಅದೇ ಆಗಿರುವುದು! ಲೇಶವಾದರೂ ಭೇದವಿಲ್ಲವು.

ಶ್ರೀಕೃಷ್ಣ:—ಹಾಗಾದರೆ ನೀವು ಬಯಸಿದ ಇಷ್ಟಾರ್ಥದಲ್ಲಿರುವ ಸಂಭಾಷಣ-ಆಲಿಂಗನ-ಆನಂದಗಳೆಂಬ ಶಬ್ದಗಳಿಗೆ ಅರ್ಥವೇನು?

ರಾಧೆ:—ಭಗವಂತನೇ! ವಿಜ್ಞಾಪಿಸುವೆನು. "ನಖಲುಗೋಪಿಕಾನಂದನೋಭವಾನ್ । ಅಖಿಲದೇಹಿನಾಂ ಅಂತರಾತ್ಮದೃಕ್ ॥ ಕೃಷ್ಣಾ, ನೀನು ಯಶೋದಾದೇವಿಯ ಪುತ್ರನೆಂಬ ಪ್ರಾಕೃತ ಭಾವವು ನಮಗಿಲ್ಲವು. ನೀನು ಯಾರೆಂಬುದನ್ನು ನಾವು ಬಲ್ಲೆವು. ಬ್ರಹ್ಮೇಂದ್ರಾದಿಗಳ ಪ್ರಾರ್ಥನೆಯಿಂದ ಲೋಕರಕ್ಷಣಾರ್ಥವಾಗಿ ಅವತರಿಸಿರುವ ಪುರಾಣಪುರುಷನೆಂಬುದನ್ನು ಬಲ್ಲೆವು. ಸರ್ವಾಂತರ್ಯಾಮಿಯಾಗಿ, ಸರ್ವಾಧಿಕಾರಿಯಾಗಿ, ಸರ್ವಜ್ಞನಾಗಿ, ಸರ್ವತಂತ್ರ ಸ್ವತಂತ್ರನಾಗಿ ಶಬ್ದಬ್ರಹ್ಮನಾಗಿ, ಪರಮಾರ್ಥ ಸುಖಪ್ರದನಾಗಿ, ವಾಚಾಮಗೋಚರನಾಗಿ, ಸಚ್ಚಿದಾನಂದ ಸ್ವರೂಪನಾಗಿರುವ ನಿನ್ನ ಅಪ್ರಾಕೃತದಿವ್ಯಮಂಗಳ ತೇಜಸ್ಸಿನಲ್ಲಿ ನಮ್ಮ ನಿಶ್ಚಯಜ್ಞಾನತೇಜವನ್ನು ಸ್ಥಿರಗೊಳಿಸಿ, "ಯಥಾನದ್ಯಸ್ಸ್ಯಂದಮಾನಾಸ್ಸಮುದ್ರೇಽಸ್ತಂಗಚ್ಛಂತಿನಾಮರೂಪೇವಿಹಾಯ" ನದಿಗಳು ಸಮುದ್ರವನ್ನು ಹೊಕ್ಕು ತಮ್ಮ ಪ್ರತ್ಯೇಕ ನಾಮಧಾಮಗಳನ್ನು ತೊರೆದು ಅಪಾರ ಸಾಗರಾನಂದವನ್ನು ಹೊಂದುವಂದದಿ ನಿನ್ನಲ್ಲಿ ಆತ್ಮ

ಸಮರ್ಪಣ ಮಾಡಿ ನಿರತಿಶಯಾನಂದವನ್ನು ಹೊಂದುವುದೇ ನಾವು ಬಯಸಿದ ಸಂಭಾಷಣಾಲಿಂಗನಾನಂದಗಳಾಗಿರುವುವು. ಮತ್ತಾವ ತುಚ್ಛ ಸುಖವನ್ನೂ ನಾವು ಬಯಸಲಿಲ್ಲವು. ಜಗನ್ನಾಥಾ ! ಅವಧರಿಸು !

(ನಾರದರು ಪ್ರವೇಶಿಸುವರು)

ನಾರದ:—ಕೃಷ್ಣಾ ! ಇವರನ್ನೇಕೆ ಬಾರಿಬಾರಿಗೂ ಪರೀಕ್ಷಿಸುವೆ ! ಜಗನ್ನಾಥಾ ! ನಿನ್ನ ಮಹಾಮಹಿಮೆಯನ್ನರಿಯಲಾರದೆ ಬ್ರಹ್ಮೇಂದ್ರಾದಿಗಳೇ ಒಂದೊಂದುವೇಳೆ ವಿಸ್ಮೃತರಾಗುತ್ತಿರುವಲ್ಲಿ ಮಿಕ್ಕವರ ಪಾಡು ಹೇಳಬೇಕೆ ! ಕರುಣಾಸಮುದ್ರನೆ ! ಇವರಿಗೆ ಸ್ವರೂಪಜ್ಞಾನವನ್ನನುಗ್ರಹಿಸು. ಭಕ್ತವತ್ಸಲನೆ ! ಜಗದಾನಂದಕರವಾದ ನಿನ್ನ ದಿವ್ಯಮಂಗಳ ವದನದಿಂದ ಜಗನ್ಮೋಹನಕರವಾದ ಮುರಳೀಗಾನವನ್ನು ಮಾಡಿ ನಮ್ಮೆಲ್ಲರಿಗೂ ನಾದಬ್ರಹ್ಮಾನಂದವನ್ನನುಗ್ರಹಿಸು !

[ಎಂದು ಪ್ರಾರ್ಥಿಸುತ್ತಾ ನಾರದರು ಶ್ರೀ ಕೃಷ್ಣ ಪರಮಾತ್ಮನಿಗೆ ಸಾಷ್ಟಾಂಗವಾಗಿ ನಮಸ್ಕರಿಸುವರು)

ಶ್ರೀಕೃಷ್ಣ:—ನಾರದಾ ! ನೀನು ನಿತ್ಯಸಂತೋಷಿಯು ! ಬ್ರಹ್ಮವೇತ್ತರಲ್ಲಿ ಅಗ್ರಗಣ್ಯನು ! ಭಕ್ತರಲ್ಲಿ ಚಕ್ರವರ್ತಿಯು ! ಭಾಗವತರಲ್ಲಿ ಪರಮಭಾಗವತನು ! ನಿನ್ನಿಷ್ಟದಂತೆಯೇ ನಡಿಸುವೆನು.

ಶ್ರೀಕೃಷ್ಣ ಪರಮಾತ್ಮನು ಗೋಪಿಯರಿಗೆ ಸ್ವರೂಪಜ್ಞಾನವನ್ನನುಗ್ರಹಿಸಿ, ನಗುಮುಖದಿಂದೊಡಗೂಡಿದ ತನ್ನ ಜಗನ್ಮೋಹನಾಕಾರ ಸಂದರ್ಶನವನ್ನು ಎಲ್ಲರಿಗೂ ದಯಪಾಲಿಸಿ, ಆನಂದಲಹರಿಯಾದ ಮುರಳೀಗಾನ ಮಾಡುವನು. ದೇವತೆಗಳು ಗಗನ ಮಾರ್ಗದಿಂದ ಪುಷ್ಪಮಳೆ ಗರೆಯುವರು. ಗೋಪಿಯರು ಸ್ವರೂಪಜ್ಞಾನವನ್ನು ಪಡೆದು ಆನಂದ ನರ್ತನ ಮಾಡುವರು.

[ಶ್ರೀಕೃಷ್ಣನ ಮುರಳಿ ಗಾನದಿಂದ ಎಲ್ಲರೂ ಆನಂದಪಡುವರು. ಆನಂದ ತುಂದಿಲರಾದ ಗೋಪಿಯರೂ, ನಾರದರು ಮುಂತಾಗಿ ಎಲ್ಲರೂ ಶ್ರೀಕೃಷ್ಣ ಪರಮಾತ್ಮನನ್ನು ಸ್ತೋತ್ರಮಾಡುವರು.]

ಸೀ॥ ಜಯದೀನಮಂದಾರ, ಜಯಶಾಂತಗಂಭೀರ ಜಯಸತ್ವಗುಣಪೂರ್ಣ, ಸದಯಹೃದಯ । ಜಯಸಜ್ಜನಾಧಾರ, ಜಯನಿರ್ಮಲಾಕಾರ ಜಯಧರ್ಮ ಗುಣಭೂಷ, ಸಾಧುಪೋಷ । ಜಯದುಃಖಪರಿಹಾರ, ಜಯಯಶೋವಿಸ್ತಾರ ಜಯಸುಂದರಾಕಾರ, ಭಯವಿದೂರ। ಜಯಭಕ್ತಹೃದ್ವಾಸ, ಜಯ ಮಂಗಳಾವಾಸ ಜಯಭವ್ಯಸುಖದಾತ, ಸರ್ವಪೂತ ॥

ಗೀ ॥ ಜಯತುಸರ್ವಾಘಶೋಷಣಶತ್ರುದಮನ। ಜಯತುಸದ್ರೂಪಸಾನಂದಸತ್ವಮೂಲ । ಜಯತುಪಾವನಚಾರಿತ್ರಜನ್ಮರಹಿತ । ಜಯತುಸರ್ವಾತ್ಮ ಶ್ರೀಕೃಷ್ಣಜಯತುಜಯತು ॥

ನಾರದರೂ, ಗೋಪಿಯರೂ, ಸರ್ವರೂ ಒಂದೇಮನಸ್ಸಿನಿಂದ ಭಗವಂತನನ್ನು ಕುರಿತು ಮಂಗಳಗೀತವನ್ನು ಹಾಡುವರು.

ರಾಗ—ಸುರಟಿ—ಆದಿತಾಳ.

ಮಂಗಳಂಮಹದಾನಂದಗೆ ಶ್ರೀಕೃಷ್ಣಗೆ ॥ ಪ ॥
ಅಂಗಜಜನಕ ಸುಮಂಗಳನಾಮಗೆ । ಸಂಗಸುಧಾರಕಗೆ ಶುಭಾಂಗಗೆ ॥ಅ॥ಪ॥
ಶ್ರೀಶಗೆ ಶಿವರಾಮದಾಸಸಂತೋಷಗೆ। ವಾಸವವಂದಿತಗೆ ವಿಶ್ವೇಶಗೆ ॥ ಮಂಗಳಂ॥




ಶ್ರೀಗೋಪಾಲಕೃಷ್ಣ ಪರಬ್ರಹ್ಮಣೇನಮಃ ॥

॥ ತತ್ಸತ್ ॥



# ಪ್ರಕಟನೆ.

ಆನಂಪಚಂದ್ರಿಕಾ ಗ್ರಂಥಮಾಲಾ! ಬೆಂಗಳೂರು ಸಿಟಿ.

## ರುಕ್ಮಿಣೀಕಲ್ಯಾಣ.

---

[1919ನೇ ಇಸವಿ ಡಿಸೆಂಬರು ತಿಂಗಳಲ್ಲಿ ಪ್ರಕಟವಾಗುತ್ತದೆ.]

### ವಿಷಯಸೂಚಿಕೆ.

ರಾಧೆಯು ಬೃಂದಾವನದ ಪ್ರತಿಯೊಂದು ವೃಕ್ಷವನ್ನೂ, ಲತೆಯನ್ನೂ ಗುಟ್ಟ ಬೆಟ್ಟಗಳನ್ನೂ, ಸಮಸ್ತವನ್ನೂ ಕೃಷ್ಣಮಯವಾಗಿ ಕಾಣುವಿಕೆ, ಪರಮಾನಂದ ಭರಿತಳಾದ ರಾಧೆಯು "ಇದಂ ವಿಶ್ವಮಖಿಲಂ ಕೃಷ್ಣಮಯಂ" ಎಂತಲೂ, "ವಿಹಿಮುದಂದೇಹಿ" ಎಂತಲೂ ಸ್ತೋತ್ರಮಾಡುವಿಕೆ, ರಾಧಾಕೃಷ್ಣವಿಲಾಸ, ಕಂಸನು ಧನುರ್ಯಾಗವೆಂಬ ನೆವದಿಂದ ರಾಮಕೃಷ್ಣರನ್ನು ಮಥುರೆಗೆ ಕರೆತರಲು ಅಕ್ರೂರನನ್ನು ಕಳುಹಿಸುವಿಕೆ, ಅಕ್ರೂರನು ಗೋಕುಲಕ್ಕೆ ಬಂದು ರಾಮಕೃಷ್ಣರನ್ನುಮಥುರೆಗೆಕರೆದುಕೊಂಡು ಹೋಗುವಿಕೆ, ಅಕ್ರೂರನಿಗೆ ಕೃಷ್ಣನು ಯಮುನಾಜಲದಲ್ಲಿಯೂ, ರಥದಮೇಲೆಯೂ, ಒಂದೇಸಾರಿ ಕಾಣಿಸುವಿಕೆ, ಅಕ್ರೂರನು ಪುಳಕಾಂಚಿತನಾಗಿ ಶ್ರೀ ಕೃಷ್ಣನನ್ನು ಸ್ತೋತ್ರಮಾಡುವಿಕೆ, ಮಥುರಾಪುರಪ್ರವೇಶ, ವಿವಿಧ ಸತ್ಕಾರಗಳು, ಕುವಲಯಾಪೀಡವೆಂಬ ಮದಗಜವನ್ನು ಶ್ರೀ ಕೃಷ್ಣನು ವಧಿಸುವಿಕೆ, ಚಾಣೂರ ಮುಷ್ಟಿಕರ ವಧೆ, ಶ್ರೀ ಕೃಷ್ಣನಿಗೂ ಕಂಸನಿಗೂ ಸಂವಾದ, ಕಂಸವಧೆ, ದೇವಕೀ ವಸುದೇವರ ಸೆರೆಯನ್ನು ಬಿಡಿಸುವಿಕೆ, ಉಗ್ರಸೇನನಿಗೆ ರಾಜ್ಯಾಭಿಷೇಕ, ಸಮುದ್ರಸಂದರ್ಶನ, ದ್ವಾರಕಾನಗರ ನಿರ್ಮಾಣ, ಶ್ರೀ ಕೃಷ್ಣನ ಯೋಗಶಕ್ತಿ, ಇಂದ್ರಾದಿಗಳ ಆಗಮನ, ಭೀಷ್ಮರಾಜನ ರಾಜ್ಯಾಂಗವೈಭವ, ಭೀಷ್ಮಕನು ತನ್ನ ಮಗಳಾದ ರುಕ್ಮಿಣೀದೇವಿಗೆ ವಿವಾಹವನ್ನು ನಿಶ್ಚೈಸುವಿಕೆ, ರುಕ್ಮಿಣಿಯು ಶಿಶುಪಾಲನನ್ನು ಅಲ್ಲಗಳೆಯುವಿಕೆ, ಶಿಶುಪಾಲನ ಕ್ರೋಧಾವೇಶ, ರುಕ್ಮಿಣಿಯ ಧಿಕ್ಕಾರ, ರುಕ್ಮಿಣೀದೇವಿಯು ಶ್ರೀಕೃಷ್ಣನಿಗೆ ಪತ್ರ ಬರೆಯು

ವಿಕೆ, ಬ್ರಾಹ್ಮಣನ ಮೂಲಕ ಕಳುಹಿಸುವಿಕೆ, ನಾರದರ ಆಗಮನ, ನಾರದರು ರುಕ್ಮಿಣಿಗೆ ಧೈರ್ಯ ಹೇಳುವಿಕೆ, ಬ್ರಾಹ್ಮಣನು ಶ್ರೀ ಕೃಷ್ಣನನ್ನು ಸಂದರ್ಶಿಸಿ ರುಕ್ಮಿಣಿಯ ಕುಶಲಪತ್ರವನ್ನು ಸಮರ್ಪಿಸುವಿಕೆ, ಶ್ರೀ ಕೃಷ್ಣನ ಪ್ರತ್ಯುತ್ತರ, ಬ್ರಾಹ್ಮಣನು ಹಿಂದಿರುಗುವಿಕೆ, ರುಕ್ಮಿಣಿಯು ಬ್ರಾಹ್ಮಣನನ್ನು ಗೌರವಿಸುವಿಕೆ, ದ್ವಾರಕೆಗೆ ನಾರದರ ಆಗಮನ, ನಾರದರು ದ್ವಾರಕೆಯ ವೈಭವವನ್ನು ವರ್ಣಿಸುವಿಕೆ, ಶ್ರೀ ಕೃಷ್ಣನು ಭೀಷ್ಮಕನ ರಾಜಧಾನಿಗೆ ಪ್ರಯಾಣ ಬೆಳೆಸುವಿಕೆ, ರುಕ್ಮಿಣೀ ಕಲ್ಯಾಣದ ಸಂಭ್ರಮ, ಶಿಸುಪಾಲಾದಿಗಳ ಆಗಮನ, ವಿವಾಹದ ಆಡಂಬರ, ಗೌರೀ ಪೂಜೆಗಾಗಿ ಪರಿವಾರದೊಂದಿಗೆ ಬರುತ್ತಿರುವ ರುಕ್ಮಿಣಿಯನ್ನು ಶ್ರೀ ಕೃಷ್ಣನು ಪರಿಗ್ರಹಿಸುವಿಕೆ, ಶ್ರೀ ಕೃಷ್ಣನು ಶಿಸುಪಾಲಾದಿಗಳನ್ನು ಭಂಗಪಡಿಸಿ, ರುಕ್ಮಿಣಿಯನ್ನು ರಥದಲ್ಲಿ ಕೂಡಿಸಿಕೊಂಡು ದ್ವಾರಕೆಗೆ ಬರುವಿಕೆ, ಶ್ರೀ ಕೃಷ್ಣನು ರುಕ್ಮಿಣಿಯ ಬಿನ್ನಪವನ್ನು ಸ್ವೀಕರಿಸುವಿಕೆ, ರುಕ್ಮಿಣೀಕಲ್ಯಾಣ, ರುಕ್ಮಿಣೀಕೃಷ್ಣರ ಆನಂದವಿಲಾಸ, ಮಂಗಳಗೀತ, ಮುಂತಾದ ವಿಷಯಗಳಿಂದಲೂ, ಚಿತ್ರಪಟಗಳಿಂದಲೂ ವಿರಾಜಿಸುತ್ತದೆ.

ಬೆಲೆ ರೂ. 1 0 0

ವಿಳಾಸ:—

ಕಾ. ಶಿವರಾಮದಾಸ್,
ಆನಂದಚಂದ್ರಿಕಾ ಆಫೀಸು,
ಬೆಂಗಳೂರು ಸಿಟಿ.

---

## ಯೋಗರಹಸ್ಯ.

(ಮೆಸ್ಮೆರಿಜಮ್ ಮತ್ತು ಹಿಪ್ನಾಟಿಜಮ್.)

1919 ಡಿಶಂಬರು ತಿಂಗಳಲ್ಲಿ ಪ್ರಕಟವಾಗುತ್ತದೆ.

ಮನೋವಶೀಕರಣ, ಮನೋನಿರಂಜನಗಳನ್ನು ಕುರಿತ ರಹಸ್ಯಗಳನ್ನು ಇಷ್ಟು ತಿಳಿವಾಗಿ ಬೋಧಿಸತಕ್ಕ ಸರ್ವಾಂಗ ಸುಂದರವಾದ ಗ್ರಂಥವು ಕನ್ನಡದಲ್ಲಿ ಈವರೆಗೂ ಪ್ರಕಟಿಸಲ್ಪಡಲಿಲ್ಲ. ಇದೇ ಮೊದಲನೇ ಗ್ರಂಥವಾಗಿರುತ್ತದೆ. ಈಗ ಅಮೇರಿಕಾ ಯೂರೋಪ್ ಮುಂತಾದ ವಿದೇಶಗಳಲ್ಲಿಯೂ, ನಮ್ಮ ಹಿಂದೂ ದೇಶದಲ್ಲಿಯೂ ಅನೇಕ ಮಂದಿ

ಈ ವಿದ್ಯೆಯನ್ನಭ್ಯಸಿಸಿ, ಅಸಾಧ್ಯವಾದ ಮತ್ತು ಅದ್ಭುತವಾದ ಅನೇಕ ಕಾರ್ಯಗಳನ್ನು ಬಹು ಸುಲಭವಾಗಿ ಸಾಧಿಸುತ್ತಿದಾರೆ. ಇದು ಯೋಗಿಗಳಿಗೂ, ಭೋಗಿಗಳಿಗೂ ಅತ್ಯವಶ್ಯಕವಾಗಿ ಬೇಕಾದ ಗ್ರಂಥವು. ಇವರ ಸಹಾಯದಿಂದ ರೋಗಗಳನ್ನು ಬಹುಬೇಗ ವಾಸಿಮಾಡಬಹುದು. ಪೀಡೆ, ಪಿಶಾಚ ಮುಂತಾದ ದುಷ್ಟ ಗ್ರಹ ಸಂಬಂಧವಾದ ಮನೋವಿಕಾರ ವ್ಯಾಧಿಗಳನ್ನು ಒಂದು ಮುಹೂರ್ತ ಕಾಲದೊಳಗೆ ಪರಿಹರಿಸಬಹುದು. ಸಂಸಾರ ತಾಪತ್ರಯದಲ್ಲಿ ಸಿಲುಕಿ ಬೇಬೇಗೆಯಾಗಿ ಬಳಲುತ್ತಾ ಚಂಚಲವಾಗಿರುವ ಮನಸ್ಸನ್ನು ನಿಗ್ರಹಿಸಿ ಒಂದು ಮಾರ್ಗದಲ್ಲಿ ಜಿತಪಡಿಸಬಹುದು. ಹಾವು, ಚೇಳು, ಹುಲಿ, ನಾಯಿ, ನರಿ ಮುಂತಾದ ವಿಷಜಂತುಗಳಿಂದುಂಟಾಗುವ ವಿಷರೋಗಗಳನ್ನು ಬಹು ಸುಲಭವಾಗಿ ನಿವಾರಿಸಬಹುದು. ಬಹು ಕೋಪಸ್ವಭಾವವುಳ್ಳವರನ್ನೂ, ಕ್ಷಾತ್ರಗುಣವುಳ್ಳವರನ್ನೂ, ಗಯ್ಯಾಳಿತನವುಳ್ಳವರನ್ನೂ, ಹುಲಿಮುಂತಾದ ಕ್ರೂರ ಜಂತುಗಳನ್ನೂ ಒಂದೇ ನಿಮಿಷದಲ್ಲಿ ಸ್ವಾಧೀನ ಪಡಿಸಿಕೊಳ್ಳಬಹುದು.

ಈ ವಿದ್ಯೆಯನ್ನಭ್ಯಾಸ ಮಾಡುವುದರಿಂದ ಇತರರ ವ್ಯಾಧಿದುಃಖಗಳನ್ನು ಪರಿಹರಿಸುವುದಕ್ಕೂ, ತಮ್ಮ ಮನೋದುಃಖಗಳನ್ನೂ, ವ್ಯಾಧಿಗಳನ್ನೂ ಪರಿಹರಿಸಿಕೊಳ್ಳುವುದಕ್ಕೂ ಅನುಕೂಲವಾದ, ಮನೋವಶೀಕರಣ ರಹಸ್ಯಗಳೆಲ್ಲವೂ ಸುಲಭವಾಗಿ ಸ್ವಾಧೀನವಾಗುತ್ತವೆ. ಇದು ವೈದ್ಯರಿಗೂ, ಜ್ಯೋತಿಷ್ಕರಿಗೂ, ಉಪಾಧ್ಯಾಯರಿಗೂ, ಉಪನ್ಯಾಸಕರಿಗೂ, ವಕೀಲರಿಗೂ, ಸಮಸ್ತರಿಗೂ ಬೇಕಾದ ಕೈಗನ್ನಡಿಯಾಗಿರುತ್ತದೆ. ಕಾಂತಲೋಹವು ಸೂಜಿಯನ್ನಾಕರ್ಷಿಸುವಂತೆ ಈ ವಿದ್ಯಾಬಲವುಳ್ಳವರು ಎಂತಹ ಕಠಿಣ ಕಾರ್ಯಗಳನ್ನಾದರೂ ಅವಲೀಲೆಯಾಗಿ ಸಾಧಿಸಬಲ್ಲರು. ದೇವತಾವಶ್ಯ, ರಾಜವಶ್ಯ, ಜನವಶ್ಯಾದಿ (ಸಾತ್ವಿಕ ಮಾರ್ಗದ) ಸಮಸ್ತ ವಶೀಕರಣೋಪಾಯಗಳೂ ವಿವರಿಸಲ್ಪಟ್ಟಿವೆ!

ವಿಳಾಸ:— ಬೆಲೆ 2 0 0

ಕಾ. ಶಿವರಾಮದಾಸ್,

ಪಬ್ಲಿಷರ್, ಆನಂದಚಂದ್ರಿಕಾ ಡಿಪೋ,

ಬೆಂಗಳೂರು ಸಿಟಿ.

## ರಾಜಯೋಗ ರತ್ನಾಕರ.

[1920ನೇ ಜನವರಿ ತಿಂಗಳಲ್ಲಿ ಪ್ರಕಟವಾಗುತ್ತದೆ.]

ಈ ಗ್ರಂಥದಲ್ಲಿ ಸಾಂಖ್ಯ - ತಾರಕ-ಅಮನಸ್ಕಾದಿ ಯೋಗರಹಸ್ಯಗಳೆಲ್ಲವೂ, ಆಚರಿಸುವುದಕ್ಕೆ ಸಾಧ್ಯವಾಗುವಂತೆ ಸುಲಭವಾದ ದೃಷ್ಟಾಂತಗಳೊಂದಿಗೆ ತಿಳಿವಾಗಿ ವಿವರಿಸಲ್ಪಟ್ಟಿದೆ. ಬೆಲೆ 1 0 0

ವಿಳಾಸ:—ಕಾ. ಶಿವರಾಮದಾಸ್,
ಆನಂದಚಂದ್ರಿಕಾ ಆಫೀಸ್, ಬೆಂಗಳೂರು ಸಿಟಿ.



## ರಾಮರಾಜ್ಯ.

[1920ನೆಯ ಫಿಬ್ರವರಿ ತಿಂಗಳಲ್ಲಿ ಪ್ರಕಟವಾಗುತ್ತದೆ.]

ಈ ಗ್ರಂಥದಲ್ಲಿ ಶ್ರೀರಾಮಚಂದ್ರನು (ರಾವಣಾಸುರನನ್ನು ಸಂಹರಿಸಿ ಅಯೋಧ್ಯೆಗೆ ಬಂದು) ಪಟ್ಟಾಭಿಷಿಕ್ತನಾಗಿ ರಾಜ್ಯಾಧಿಪತ್ಯವನ್ನು ವಹಿಸಿದನಂತರ ಹನ್ನೊಂದುಸಾವಿರ ವರ್ಷಗಳು ಏಕಚಕ್ರಾಧಿಪತ್ಯವಾಗಿ ನಡಿಸಿದ ರಾಜ್ಯಭಾರದ ವೈಭವವೂ, ಮತ - ನೀತಿ - ಸಂಘಪದ್ಧತಿಗಳನ್ನು ಪರಿಪಾಲಿಸಿದ ಧರ್ಮಸೂಕ್ಷ್ಮತೆಯೂ, ಖಗೋಳ - ಭೂಗೋಳ ತತ್ವರಹಸ್ಯಗಳನ್ನು ವಸಿಷ್ಠ ವಿಶ್ವಾಮಿತ್ರರ ಮೂಲಕ ಪ್ರಚಾರಪಡಿಸಿದ ವೈಜ್ಞಾನಿಕ ಕೌಶಲವೂ, ಸೀತಾದೇವಿಯು ಸ್ತ್ರೀಯರ ವಿಚಾರದಲ್ಲಿ ಏರ್ಪಡಿಸಿದ ಸಂಘಶಾಸನಗಳೂ, ಲಕ್ಷ್ಮಣ - ಭರತ - ಶತ್ರುಘ್ನರಿಗೆ ಸಾಮಂತರಾಜ್ಯಾಧಿಪತ್ಯವನ್ನು ಕೊಟ್ಟಾಗ ಶ್ರೀರಾಮಚಂದ್ರನು ಮಾಡಿದ ರಾಜಧರ್ಮ ಪ್ರಸಂಗವೂ, ಶ್ರೀರಾಮನು ಆಂಜನೇಯನಿಗೆ ಬೋಧಿಸಿದ ತತ್ವಾರ್ಥ ರಹಸ್ಯವೂ, ಬಹಳ ವಿವರವಾಗಿಯೂ, ಪ್ರಮಾಣವಾಕ್ಯಸಮ್ಮತವಾಗಿಯೂ ವಿರಚಿಸಲ್ಪಟ್ಟಿದೆ. ಬೆಲೆ 1 0 0

☞ ನಮ್ಮ ಗ್ರಂಥಮಾಲೆಯ ಪ್ರತಿಯೊಂದು ಗ್ರಂಥವೂ ಸುಲಭವಾದ ಮತ್ತು ಮನೋಹರವಾದ ವಚನಶೈಲಿಯಿಂದ ವಿರಚಿತವಾಗಿರುತ್ತವೆ.

ವಿಳಾಸ:—ಕಾ. ಶಿವರಾಮದಾಸ್, ಸಂಪಾದಕ,
ಆನಂದಚಂದ್ರಿಕೆ, ಬೆಂಗಳೂರು ಸಿಟಿ.

# ಭದ್ರಾಚಲರಾಮದಾಸ ಚರಿತ್ರೆ.

(ಎರಡನೇ ಮುದ್ರಣ.) 1919 ಅಕ್ಟೋಬರ್ ತಿಂಗಳಲ್ಲಿ ಪ್ರಕಟವಾಗುತ್ತೆ.

ಶ್ರೀ ರಾಮಭಕ್ತಿ ಸಾಮ್ರಾಜ್ಯವನ್ನು ಸೂರೆಗೊಂಡ ಭಕ್ತಾಗ್ರೇಸರರಾದ ಶ್ರೀ ರಾಮದಾಸರ ಚರಿತ್ರವನ್ನು ಸಾವಿರಾರುಮಂದಿ ಅನುದಿನವೂ ಪಠಿಸಿ ಸಂತೋಷಿಸಬೇಕೆಂಬ ಸಂಕಲ್ಪದಿಂದ ಈ ಗ್ರಂಥವನ್ನು ಕನ್ನಡಭಾಷೆಯಲ್ಲಿ ಸಿದ್ಧಪಡಿಸಿರುತ್ತೇವೆ.

## ವಿ ಷ ಯ ಸೂ ಚಿ ಕೆ .

ಅವತಾರಿಕೆ, ದಿವ್ಯಮಂಗಳನಾಮಸಂಕೀರ್ತನೆ, ಶ್ರೀ ರಾಮನವಮೀ ಮಹೋತ್ಸವಕ್ಕಾಗಿ ಭಕ್ತಾದಿಗಳು ತಂಡೋಪತಂಡವಾಗಿ ಶ್ರೀ ಭದ್ರಾಚಲಕ್ಕೆ ಹೋಗುವಿಕೆ, ಗೋಪಣ್ಣನಿಗೂ (ರಾಮದಾಸರ ಪೂರ್ವ ನಾಮಧೇಯ) ಶ್ರೀ ಕಬೀರುದಾಸರಿಗೂ ಪರಿಚಯವುಂಟಾಗುವಿಕೆ, ಕಬೀರುದಾಸರು ಗೋಪಣ್ಣನಿಗೆ ರಾಮತಾರಕ ಮಂತ್ರೋಪದೇಶಮಾಡುವಿಕೆ, ಅರ್ಚಕರ ಮತಾವೇಶ ಪ್ರಸಂಗಗಳು, ಕಬೀರುದಾಸರ ಪ್ರಭಾವವು ಬಯಲಾಗುವಿಕೆ, ಗೋಲಕೊಂಡಾ ನವಾಬನಾದ "ತಾನೀಷಾ" ಮಹಾಶಯನ ವೈಭವ ಮತ್ತು ಸುಗುಣಾಭಿವರ್ಣನೆ, ಯಾವ ಜಾತಿಯಲ್ಲಿ ಹುಟ್ಟಿದವರಾದರೂ ಭಗವದ್ಭಕ್ತರು ಸರ್ವತ್ರ ಪೂಜ್ಯರೆಂಬ ಸಿದ್ಧಾಂತ. ಅಕ್ಕಣ್ಣ, ಮಾದಣ್ಣರೆಂಬ ಬ್ರಾಹ್ಮಣಮಂತ್ರಿಗಳ ರಾಜಕಾರ್ಯ ಧುರಂಧರತೆ, ತಾನಿಷಾ ಪ್ರಭುವಿನ ಧರ್ಮಪತ್ನಿಯಾದ ಸಿತಾರಾಬೇಗಮಿನ ಸದ್ವರ್ತನ, ಪ್ರಜಾನುರಾಗ, ಗೋಪಣ್ಣನ ಪತ್ನಿಯಾದ "ಕಮಲೆಯ" ಪತಿಭಕ್ತಿ, ವಿಜ್ಞಾನ ವೈಭವ, ಕಬೀರರು ಗೋಪಣ್ಣನ ಭಕ್ತಿಗೆ ಆಶ್ಚರ್ಯಚಕಿತರಾಗಿ ಆತನಿಗೆ "ರಾಮದಾಸ" ರೆಂಬ ನಾಮಕರಣ ಮಾಡುವಿಕೆ, ರಾಮದಾಸರ ಮಗನಾದ ಕೋದಂಡರಾಮನೆಂಬ ಬಾಲಕನು ಜತೆಹುಡುಗರೊಡನೆ ರಾಮಭಜನರೂಪವಾದ ಆಟವಾಡುವಿಕೆ. ರಾಮದಾಸರು ತಮ್ಮ ಸರ್ವಸ್ವವನ್ನೂ ದಾನಮಾಡುವಿಕೆ, ಪುತ್ರಶೋಕ, ಕೋದಂಡರಾಮನು ಪುನಃ ಜೀವಿಸುವಿಕೆ, ಸತೀಸುತಸಹಿತರಾಗಿ ರಾಮದಾಸರು ಭದ್ರಾಚಲಕ್ಕೆ ತೆರಳುವಿಕೆ, ಕೋದಂಡರಾಮನ ಅಗಲಿಕೆ. ರಾಮದಾಸರ ಮನೋನಿಗ್ರಹ, ವೇಶ್ಯಾವಿನೋದ ವ್ಯಸನಗರಾಗಿದ್ದ ಭದ್ರಾಚಲಪುರವಾಸಿಗಳಿಗೆ ರಾಮದಾಸರು ಹಿತೋಪದೇಶಮಾಡಿ ಅವ

ರನ್ನು ಹಿಡಿದಿದ್ದ ಸಪ್ತವ್ಯಸನ ಪಿಶಾಚವನ್ನು ಪಲಾಯನಗೊಳಿಸುವಿಕೆ, ರಾಮದಾಸರಿಗೆ ಭದ್ರಾಚಲತಾಲ್ಲೂಕು ಅಮಲ್ದಾರೀಪದವಿ ಲಭಿಸುವಿಕೆ, ರಾಮದಾಸನು ರಾಜಭಂಡಾರದ ಹಣದಿಂದ ಶ್ರೀ ಸೀತಾರಾಮರಿಗೆ ಆಲಯ ಪ್ರಾಕಾರ ಗೋಪುರ ವಸ್ತ್ರಾಭರಣಾದಿ ಭೂಷಣಗಳನ್ನು ಮಾಡಿಸುವಿಕೆ, ಚಾಡಿಗಾರರೀವಿಷಯವನ್ನು "ತಾನಿಷಾ" ರಾಜನಿಗೆ ತಿಳುಹಿಸುವಿಕೆ, ತಾನೀಷಾ ತನ್ನ ಅಂತಃಪುರದಲ್ಲಿ ಸಿತಾರಾಬೇಗಮಿನೊಂದಿಗೆ ಸರಸಸಲ್ಲಾಪಮಾಡುವಿಕೆ, ಮಹಮ್ಮದೀಯ ಸರದಾರರ ದುರ್ಬೋಧನೆ "ಸಿತಾರಾ ಬೇಗಮ್" ಪತಿಗೆ ಹಿತೋಪದೇಶ ಮಾಡುವಿಕೆ, ಆತನ ಧಿಕ್ಕಾರ, ರಾಮದಾಸರನ್ನು ಸೆರೆಹಿಡಿಯುವಿಕೆ, ಕಮಲಾ ಕೋದಂಡರಾಮರ ಪರಿತಾಪ, ತಾನೀಷಾ ರಾಮದಾಸರ ಸಂವಾದ (ಬಹು ಸ್ವಾರಸ್ಯವಾದುದು) ರಾಮದಾಸರ ಕಾರಾಗೃಹವಾಸ, ನಾನಾವಿಧ ಹಿಂಸೆಗಳು, ರಾಮದಾಸರ ಮನಸ್ಥೈರ್ಯ, ಮಹಮ್ಮದೀಯ ಸರದಾರರ ಪರಿಹಾಸ್ಯ, ವಿಷಪರೀಕ್ಷೆ, ರಾಮದಾಸರ ನಿಶ್ಚಲತ, ಅಖಂಡ ರಾಮಭಜನೆ, "ತಾನಿಷಾ" ನವಾಬಿನ ನಿದ್ರಾವಸ್ಥೆ–ಶ್ರೀರಾಮ ಲಕ್ಷ್ಮಣರ ದಿವ್ಯಮಂಗಳಸ್ವರೂಪಸಂದರ್ಶನ, ಧನಸಮರ್ಪಣ, ಋಣವಿಮೋಚನ, ಸಿತಾರಾ–ತಾನೀಷಾಗಳ ಪಶ್ಚಾತ್ತಾಪ, ಶಿರಚ್ಛೇದನಸಂಧಿ, ರಾಮದಾಸರ ನಿಶ್ಚಲ ಬ್ರಹ್ಮೋಪಾಸನೆ, ನವಾಬನು ಸತೀಸಹಿತವಾಗಿ ರಾಮದಾಸರ ಮರೆಹೋಗುವಿಕೆ, ಕಬೀರರ ಆಗಮನ, ಪರಮಭಾಗವತವೈಭವ, ಶ್ರೀಸೀತಾರಾಮಸಂದರ್ಶನ, ಮೋಕ್ಷಸಾಮ್ರಾಜ್ಯ – ಆನಂದಲಹರೀ ಮುಂತಾದುವುಗಳು. ಮಧುರಪದಗುಂಭಿತವಾದ ವಚನ ಶೈಲಿ; ಮನೋಹರವಾದ ಕಂದ, ಗೀತ, ಚಂಪಕಮಾಲಾ ಮುಂತಾದ ವೃತ್ತ ರಾಜಗಳು, ರಮಣೀಯವಾದ ಹಾಡುಗಳು, ಮುಂತಾದ ವಚನರಚನಾಕ್ರಮದಿಂದೊಪ್ಪಿರುವ ಇದು ಎಲ್ಲರಿಗೂ ಉಪಯುಕ್ತವಾದ ಗ್ರಂಥವು.

*N. B.*—ಹಾಡುಗಳನ್ನು 'ಅನುಬಂಧ'ವೆಂಬ ಶೀರ್ಷಿಕೆಯಲ್ಲಿ ಪ್ರತ್ಯೇಕವಾಗಿ ಅಲಂಕರಿಸಿರುವುದರಿಂದ ಸಂಗೀತ ಬಂದವರು ಬಾರದವರು ಸಹಾ ಇದನ್ನು ಸುಲಭವಾಗಿ ಓದಿ ಆನಂದಿಸಬಹುದು. ಇದರ ಕ್ರಯ ಪ್ರತಿ ೧ಕ್ಕೆ ಒಂದು ರೂಪಾಯಿ.

☞ ಪುಸ್ತಕ ದೊರೆಯತಕ್ಕ ಸ್ಥಳಗಳು :—

ಕಾ. ಶಿವರಾಮದಾಸ್,
ಆನಂದಚಂದ್ರಿಕಾ ಆಫೀಸ್,
ಬೆಂಗಳೂರು ಸಿಟಿ.

ಅಥವಾ,

ವೆ. ಬಿ. ಸುಬ್ಬಯ್ಯ
ಅಂಡ್ ಸನ್ಸ್,
ಕೋಟೆ, ಬೆಂಗಳೂರು ಸಿಟಿ.

# ಆನಂದ ಚಂದ್ರಿಕೆ



ರಸಭರಿತವಾದ ವಿಷಯಗಳಿಂದೊಡಗೂಡಿದ ಉತ್ತಮವರ್ಗದ ಸಚಿತ್ರಮಾಸಪತ್ರಿಕೆ.

ಚಂದಾ:—ಒಂದು ವರ್ಷಕ್ಕೆ ರೂ. 3—0—0.

ಈ ಪತ್ರಿಕೆಯಲ್ಲಿರುವ ವಿಷಯಗಳೇನು ?

ಈಶ್ವರ ಪ್ರಾರ್ಥನೆಗಳು, ಶ್ಲೋಕಗಳು, ಪದ್ಯಗಳು, ವಚನಗಳು ಮುಂತಾದ ಅನೇಕ ಸ್ತೋತ್ರಪಾಠಗಳು, ವೇದ, ವೇದಾಂಗ, ವೇದಾಂತ ಸೂತ್ರಾರ್ಥಗಳು, ಪೂರ್ವಕಾಲದ ಚಕ್ರವರ್ತಿಗಳ, ಮಹಾರಾಜರ, ಮಹಾರಾಣಿಯರ ಪವಿತ್ರ ಚರಿತ್ರೆಗಳು, ಪರಮ ತಪೋಧನರಾದ ಮಹಾಋಷಿಗಳ, ಋಷಿಪತ್ನಿಯರ ಪಾವನ ಜೀವನಗಳು,—ಪ್ರಹ್ಲಾದ, ನಾರದ ಪರಾಶರ, ಧ್ರುವ, ಗಜೇಂದ್ರಾದಿ ಪರಮಭಕ್ತರ ಭಾಗವತ ವೈಭವಗಳು, ಜ್ಞಾನದೇವ, ನಾಮದೇವ, ತುಕಾರಾಂ, ಮೀರಾಬಾಯಿ, ಜನಾಬಾಯಿ ಮುಂತಾದ ಸಾಧುಜನರ ತತ್ವೋಪದೇಶಗಳು, ಈ ಕಾಲದ ಸ್ವದೇಶ ವಿದೇಶ ಪರಿಪಾಲಕರಾದ ರಾಜಾಧಿರಾಜರ ಸಂಪದ್ವೈಭವಗಳು.

ದೇಶಬಾಂಧವರೂ, ಧರ್ಮಾತ್ಮರೂ ಆದ ಸುಪ್ರಸಿದ್ಧ ಸ್ತ್ರೀಪುರುಷರ ಚಿತ್ರಪಟಗಳು, ಜೀವನ ಚರಿತ್ರೆಗಳು, ಅವರ ಪರೋಪಕಾರ ಕಾರ್ಯಗಳು, ಸ್ವಾಮಿ ರಾಮಕೃಷ್ಣ ಪರಮಹಂಸ, ವಿವೇಕಾನಂದ, ರಾಮತೀರ್ಥ, ದಯಾನಂದ, ರಾಮಮೋಹನ ಮುಂತಾದ ಮಹಾತ್ಮರ ಜ್ಞಾನೋಪದೇಶಗಳು, ನೀತಿಬೋಧಕವಾದ ಕಥೆಗಳು, ನವರಸಾಲಂಕಾರವಾದ ನಾಟಕಗಳು, ಆತ್ಮೋಜ್ಜೀವಕಗಳಾದ ಮತೋಪನ್ಯಾಸಗಳು, ತೀರ್ಥಕ್ಷೇತ್ರ, ಪ್ರಭಾವಗಳು, ಆಶ್ಚರ್ಯಕರವಾದ ವಿವಿದ ವಿನೋದಗಳು, ರಸಭರಿತವಾದ ನಾವಲ್ (ಕಾದಂಬರಿ)ಗಳು, ಹಾಸ್ಯರಸ ಪ್ರಸಂಗಗಳು, ಸ್ವದೇಶ ವಿದೇಶ ಸಂಗ್ರಹ ವೃತ್ತಾಂತಗಳು, ಹೆಚ್ಚು ಹೇಳಲೇಕೆ ? ಮಾನವ ಜನ್ಮ ಸಾಫಲ್ಯ ಸಾಧನಭೂತವಾದ ಸಮಸ್ತ ವಿಷಯಗಳೂ, ಶಾಸ್ತ್ರೋಕ್ತ

ವಾದ ವ್ಯವಸಾಯ ಪದ್ಧತಿಗಳೂ, ಕೈಗಾರಿಕೆ, ಪಾಕಶಾಸ್ತ್ರ, ಆ
ಶಾಸ್ತ್ರ, ಸಂಗೀತ ಮುಂತಾದ ಕುಶಲ ವಿದ್ಯೆಗಳೂ, ಗ್ರಂಥವಿಮ
ಗಳೂ, ಈ ಪತ್ರಿಕೆಯಲ್ಲಿ ಸಚಿತ್ರವಾಗಿ ಪ್ರಕಟಿಸಲ್ಪಡುತ್ತವೆ.

☞ ವಿದ್ಯಾವಂತರಾದ ಸ್ತ್ರೀಪುರುಷರಿಂದ ಬರೆಯಲ್ಪಟ್ಟ ಅಪೂ
ವಿಷಯಗಳು ಪ್ರತಿ ತಿಂಗಳಲ್ಲಿಯೂ ಉತ್ಕೃಷ್ಟವಾದ ಚಿತ್ರಪಟಗಳೊಂ
ಪ್ರಕಟಿಸಲ್ಪಡುವುವು. ಮಾದರಿ ಪತ್ರಿಕೆ ಬೆಲೆ 0 4

## ಪುರಂದರದಾಸರ ಚರಿತ್ರೆ.

[1919ನೇ ನವಂಬರು ತಿಂಗಳಲ್ಲಿ ಪ್ರಕಟವಾಗುತ್ತದೆ.]

ಕಾದಂಬರಿಯಂತೆಯೂ, ಹರಿಕಥೆಯಂತೆಯೂ ಓದಿಕೊಳ್ಳು
ಕ್ಕೂ, ನಾಟಕರೂಪವಾಗಿ ಸ್ಟೇಜಿನಲ್ಲಿ ಪ್ರದರ್ಶಿಸುವುದಕ್ಕೂ ಅ
ಕೂಲವಾಗಿರುವಂತೆ ಉಭಯ ಸೌಕರ್ಯಗಳನ್ನನುಸರಿಸಿ, ಲಲಿತವಾ
ವಚನಶ್ಶೈಲಿಯಲ್ಲಿ ವಿರಚಿಸಲ್ಪಟ್ಟಿದೆ. ಪುರಂದರದಾಸರ ಮತ್ತು ಅ
ಪತ್ನೀಪುತ್ರರ ಚಿತ್ರಪಟಗಳಿಂದಲೂ, ಅವರ (108) ಕೀರ್ತನೆಗಳಿ
ಲೂ ವಿರಾಜಿಸುತ್ತಿದೆ. ಒಂದಾಣೆ ಪೋಸ್ಟೇಜು ಸ್ಟಾಂಪನ್ನು ಕಳುಹಿ
ದರೆ ವಿಷಯ ಸೂಚಿಕೆ (Contents) ಪತ್ರವನ್ನು ಕಳುಹಿಸುತ್ತೇ

ಅಂದವಾದ ಗ್ಲೇಜುಕಾಗದಗಳ ಮೇಲೆ ಮುದ್ರಿಸಲ್ಪಟ್ಟ
ಕ್ಯಾಲಿಕೋ ಬೈಂಡಿನ ಪ್ರತಿ 1ಕ್ಕೆ ರೂ. 2—0—0.
ಸಾಧಾರಣ ಕಾಗದಗಳ ಪ್ರತಿಗೆ ರೂ. 1—0—0.



ಶ್ರೀಕೃಷ್ಣಲೀಲೆ. —(ಸಿದ್ಧವಾಗಿದೆ) ಬೆಲೆ ರೂ. 1—4—0.
ಗೋಪೀಚಂದ್ರಚರಿತ್ರೆ, (ಸಿದ್ಧವಾಗಿದೆ.) ಬೆಲೆ ರೂ. 0—8—

ವಿಳಾಸ:—

ಕಾ. ಶಿವರಾಮದಾಸ್,
...ದಚಂದ್ರಿಕೆ,
...ಂಗಳೂರು ಸಿಟಿ.



